# ನಮ್ಮ ಮಾನಸ

**ಜೂನ್ 2009**
ಸಂಪುಟ : 3 ಸಂಚಿಕೆ : 2

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara*
*New Timberyard Layout, Bangalore-26.*
*© : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ**

*ಸಲಹೆ – ಸಹಕಾರ*
**ಇಳಾ ವಿಜಯ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** (ವಿಶೇಷ ಸಂಚಿಕೆಯೊಂದಿಗೆ) | **100–00 ರೂ.** |
| **ಸಂಸ್ಥೆಗಳಿಗೆ** | **150–00 ರೂ.** |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**
*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**




## ಕಮಲಾದಾಸ್ → ಮಾಧವಿಕುಟ್ಟಿ → ಕಮಲಾ ಸುರಯ್ಯ

ಬದುಕೇ ಒಂದು ಗಹನವಾದ ಕವಿತೆಯಂತೆ ಇದ್ದ ದಿಟ್ಟ ಲೇಖಕಿ ಕಮಲಾದಾಸ್ ಇನ್ನಿಲ್ಲ. ಭಾರತೀಯ ಹೆಣ್ಣಾಗಿ ಎಲ್ಲಾ ದಿಗ್ಬಂಧನಗಳ ಗಡಿಗಳನ್ನೂ ಮುರಿದು ಬರೆದದ್ದೇ ಅವರ ಶಕ್ತಿಯಾಗಿತ್ತು. ಹೆಣ್ಣಿನ ಲೈಂಗಿಕತೆಯನ್ನು ದಿಟ್ಟವಾಗಿ, ಪ್ರಾಮಾಣಿಕತನದಿಂದ ಶೋಧಿಸಿರುವ ಮೊದಲ ಬರಹಗಾರರಲ್ಲಿ ಒಬ್ಬರು ಕಮಲಾದಾಸ್. ಅವರ ಹೆಸರು ಜಗತ್ತಿಗೆಲ್ಲ ಹರಡಿದ್ದು 1976ರಲ್ಲಿ – ತಮ್ಮ 42ನೇ ವಯಸ್ಸಿನಲ್ಲಿ – ಅವರು ಪ್ರಕಟಿಸಿದ ಆತ್ಮಚರಿತ್ರೆ 'My Story'ಯಿಂದ. 15 ಭಾಷೆಗಳಿಗೆ ಅನುವಾದಗೊಂಡಿರುವ ಈ ಕೃತಿಯು ಗಾಂಧೀಜಿಯವರ 'My Experiments with Truth' ನಂತರದ ಅಷ್ಟೇ ಪ್ರಾಮಾಣಿಕತೆಯ ಕೃತಿಯೆಂದು ಪ್ರಸಿದ್ಧಿ ಪಡೆದಿದೆ.

ಇಂಗ್ಲಿಷ್‌ನಲ್ಲಿ ಕಮಲಾದಾಸ್ ಆಗಿ, ಮಲಯಾಳದಲ್ಲಿ ಮಾಧವಿ ಕುಟ್ಟಿಯಾಗಿ ಹಲವಾರು ಕವನ ಸಂಕಲನಗಳು, ಕಥಾಸಂಕಲನಗಳು ಹಾಗೂ ಕಾದಂಬರಿಗಳನ್ನು ರಚಿಸಿ ಅವರು ಪಡೆದ ಪ್ರಶಸ್ತಿಗಳಿಗೆ ಬಹುಶಃ ಲೆಕ್ಕವಿಲ್ಲ. ಭಾರತದಾದ್ಯಂತ ಎಲ್ಲ ಶೋಷಿತ ಹೆಣ್ಣುಗಳ ಮುಖವಾಣಿಯಾಗುವಂತಹ ಸಾಹಿತ್ಯ ನೀಡಿರುವ ಈ ದಿಟ್ಟ ಲೇಖಕಿ ಬದುಕಿನ ಕೊನೆಯಲ್ಲಿ ಇಸ್ಲಾಂ ಧರ್ಮದಲ್ಲಿ ಮಹಿಳೆಗೆ ಹೆಚ್ಚಿನ ಗೌರವದ ಸ್ಥಾನವಿದೆಯೆಂದು ಧರ್ಮಾಂತರ ಗೊಂಡು 'ಕಮಲಾ ಸುರಯ್ಯ' ಆದದ್ದು ಈ ಬದುಕಿನ ನಿಗೂಢ ವಿಪರ್ಯಾಸ ಗಳಿಗೆ ಒಂದು ನಿದರ್ಶನ. ಈ ಆಯ್ಕೆಯ ಬಗ್ಗೆ ಅವರು ಬೇಗನೆ ಭ್ರಮನಿರಸನ ಹೊಂದಿ "ಭಗವಂತನಿಗೆ ಯಾವುದೇ ಒಂದು ಧರ್ಮದ ಸಂಬಂಧವೂ ಇಲ್ಲ, ಎಲ್ಲಿಯೂ ಹೆಣ್ಣಿಗೆ ಗೌರವ ಎಂಬುದಿಲ್ಲ" ಎಂದು ನಿಟ್ಟುಸಿರುಗರೆದದ್ದೂ ಇದೆ.

ಇಂಥ ಸಂಕೀರ್ಣ ವ್ಯಕ್ತಿತ್ವದ ಕಮಲಾದಾಸ್ ದೀರ್ಘವಾದ ಬೇನೆಯಿಂದ ನರಳಿ, ತಮ್ಮ 76ನೆಯ ವಯಸ್ಸಿನಲ್ಲಿ ಮೇ 31, 2009ರ ಭಾನುವಾರದಂದು ದೇಹದಿಂದ ಬಿಡುಗಡೆ ಹೊಂದಿದರು. ಆದರೆ ತಮ್ಮ ಕವಿತೆ, ಕಥೆ, ಸ್ವಾನುಭವದ ಕಥನಗಳನ್ನು ನಮ್ಮ ನೆನಪುಗಳಲ್ಲಿ ಬಿತ್ತಿ ಹೋಗಿದ್ದಾರೆ.

❑




# ಮಹಿಳೆಯರ ಸ್ವತಂತ್ರ ವ್ಯಕ್ತಿತ್ವವನ್ನು ಕಿತ್ತುಕೊಳ್ಳಬೇಡಿ...

ಚಲನಚಿತ್ರ ತಾರೆ ಶ್ರುತಿ ಅವರು ಇತ್ತೀಚೆಗೆ ರಾಜಕೀಯದಲ್ಲಿ ಹೆಚ್ಚು ಸಕ್ರಿಯರಾದರು. ಅವರ ಸಾಮರ್ಥ್ಯವನ್ನು ಗುರುತಿಸಿದ ಸರ್ಕಾರ ಆಕೆಗೆ ಜವಾಬ್ದಾರಿಯುತ ಸ್ಥಾನವನ್ನೂ ಕೊಟ್ಟಿತು. ಆಕೆಯ ವೈಯಕ್ತಿಕ ಬದುಕಿನಲ್ಲಿಯ ಏರುಪೇರುಗಳಿಂದಾಗಿ ಆಕೆ ವಿಚ್ಛೇದನದಂಥ ಗಂಭೀರ ನಿರ್ಧಾರ ತೆಗೆದುಕೊಂಡರು. ಮಾಧ್ಯಮಗಳ ಪ್ರಚಾರ, ಒತ್ತಡದಿಂದಾಗಿ ಮತ್ತು ಆಕೆ ಸ್ವಭಾವತಃ ದಿಟ್ಟ ನಿಲುವಿನವರಾದ್ದರಿಂದ ತಾವು ನಂಬಿದ ಸತ್ಯವನ್ನು ಬಹಿರಂಗಗೊಳಿಸಿದರು. ಮತ್ತು ವಿಚ್ಛೇದನದ ಅನಂತರ ತಾವು ಮರುಮದುವೆ ಆಗುವ ಬಗ್ಗೆಯೂ ಹೇಳಿಕೊಂಡರು. ಇಲ್ಲಿಂದಾಚೆಗೆ ವಿಚಿತ್ರ ತಿರುವುಗಳು, ಹಿತಾಸಕ್ತರ ವಿಚಿತ್ರ ಹೇಳಿಕೆಗಳೂ ಪ್ರಾರಂಭವಾದವು. ಶ್ರುತಿ ಕೇವಲ ವಿಚ್ಛೇದನವನ್ನು ಪಡೆದು ತ್ಯಾಗಮಯಿಯಾಗಿ, ಮಗಳಿಗೋಸ್ಕರ ಒಂಟಿಯಾಗಿ ಜೀವನ ನಡೆಸುತ್ತೇನೆಂದಿದ್ದರೆ ನಮ್ಮ ಸಮಾಜದ ಪುರುಷ ಪ್ರಧಾನ ಮನಸ್ಸುಗಳು ಸುಲಭವಾಗಿ ಒಪ್ಪುತ್ತಿದ್ದುವೇನೊ! ಆಗ ಆಕೆ 'ಆದರ್ಶ' ತಾಯಿಯಾಗಿ ಮನ್ನಣೆ ಗಳಿಸುತ್ತಿದ್ದಳು. ತನ್ನ ಕುಟುಂಬದ ಕುಡಿಗಾಗಿ ಸರ್ವಸುಖಗಳನ್ನು ತ್ಯಾಗಮಾಡಿದ 'ಮಾತೆ'ಯಾಗುತ್ತಿದ್ದಳು. ಕೆಲವೊಮ್ಮೆ ಒಳದಾರಿಗಳನ್ನು ಕಂಡುಕೊಂಡರೂ ನಮ್ಮ ಸಮಾಜ ಕಂಡೂ ಕಾಣದಂತೆ ಒಪ್ಪಿಕೊಳ್ಳುತ್ತದೆ. ಆದರೆ ಸಮಸ್ಯೆಯಿರುವುದು ಮಹಿಳೆ ಎರಡನೇ ಬಾರಿ ಅಧಿಕೃತವಾಗಿ ಮದುವೆಯಾಗುವುದು! ಪುರುಷಪ್ರಧಾನ 'ವಂಶವಾಹಿನಿ'ಯ ಪ್ರಶ್ನೆ ಇಲ್ಲಿದೆ.

ಕುಟುಂಬದ ಪಾವಿತ್ರ್ಯ, ಭದ್ರತೆಯೇ ಮುಖ್ಯವೆನ್ನುವುದಾದರೆ, ಇದು ಪುರುಷರಿಗೆ ಅನ್ವಯವಾಗುವುದಿಲ್ಲವೆ? ಎಷ್ಟು ಜನ ಪುರುಷರು ಹೆಂಡತಿಯರಿಗೆ ವಿಚ್ಛೇದನ ನೀಡಿ ಅವರನ್ನು, ಮಕ್ಕಳನ್ನು ಬೀದಿಪಾಲು ಮಾಡಿಲ್ಲ? ವಿವಾಹಿತ ಹೆಣ್ಣುಮಕ್ಕಳು ವರದಕ್ಷಿಣೆ ಕಾರಣದಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಿಲ್ಲವೆ? ಕೌಟುಂಬಿಕ ದೌರ್ಜನ್ಯ ತಾಳಲಾರದೆ ಮಹಿಳೆಯರು ಮಕ್ಕಳೊಂದಿಗೆ ಕೆರೆಪಾಲಾಗುತ್ತಿಲ್ಲವೆ? ಕುಡಿತದ ಹಿಂಸೆಗೆ ಬೆನ್ನು ನೀಡಿ ಮಹಿಳೆಯರು ಬದುಕುತ್ತಿಲ್ಲವೆ? ಇಂತಹ ಸಂದರ್ಭಗಳಲ್ಲೆಲ್ಲಾ ಕುಟುಂಬದ ಸಮಭಾಗಿಯಾದ ಪುರುಷರನ್ನು ಸಮಾಜ ಟಾರ್ಗೆಟ್ ಮಾಡಿಕೊಳ್ಳುವುದಿಲ್ಲವಲ್ಲ!

ಶ್ರುತಿಯವರನ್ನು ಮಹಿಳಾ ನಿಗಮದ ಅಧ್ಯಕ್ಷ ಸ್ಥಾನದಿಂದ ಕಿತ್ತುಹಾಕಬೇಕೆಂಬ ಒತ್ತಡವನ್ನು ಬಿ.ಜೆ.ಪಿ. ಪಕ್ಷದ ಮುಖಂಡರು ಹಾಕುತ್ತಿದ್ದಾರೆ. ಈ ಒತ್ತಡಗಳ ಹಿಂದಿರುವ ಕೋಮುವಾದಿ ಮನಸ್ಸು ಹಾಗೂ ಶಕ್ತಿಗಳು ಮಹಿಳೆಯರಿಗಿರುವ ಸ್ವತಂತ್ರ ವ್ಯಕ್ತಿತ್ವವನ್ನು ಕಿತ್ತುಕೊಳ್ಳಲು ಪ್ರಯತ್ನಿಸುತ್ತಿವೆ. ಸತಿಪದ್ಧತಿಯನ್ನು ವಿಜೃಂಭಿಸುವ ಪ್ರಯತ್ನ, ಮಂಗಳೂರಿನಲ್ಲಿ ಪಬ್‌ದಾಳಿಯ ಸಂದರ್ಭದಲ್ಲಿ ಹೆಣ್ಣುಮಕ್ಕಳ ಮೇಲೆ ನಡೆದ ದೌರ್ಜನ್ಯ, ವಸ್ತ್ರಸಂಹಿತೆ, ಈಗ ವಿಚ್ಛೇದನಾ ಹಕ್ಕಿನ ನಿರಾಕರಣೆ ಹೀಗೆ ಮಹಿಳೆಯರಿಗಿರುವ ಸಂವಿಧಾನ ಬದ್ಧ ಹಕ್ಕುಗಳನ್ನು ಸಂಸ್ಕೃತಿಯ ನೆಪದಲ್ಲಿ ಕಿತ್ತುಕೊಳ್ಳುವ ಹುನ್ನಾರವನ್ನು ನಾವು ಕಾಣಬಹುದು. ಕುಟುಂಬದಲ್ಲಿ ಅಮಾನುಷ ಹಿಂಸೆ, ಕ್ರೌರ್ಯದ ವಾತಾವರಣವಿದ್ದರೂ ಅದನ್ನು ಬಹಿರಂಗಗೊಳಿಸದೇ ಕುಟುಂಬದ ಗೌರವವನ್ನು ಕಾಪಾಡಿಕೊಂಡು ಹೋಗಬೇಕಾಗುತ್ತದೆ ಎಂಬ ಸಾಂಪ್ರದಾಯಿಕ ಮೌಲ್ಯವನ್ನು ಬಲಪಡಿಸುವ ಯತ್ನ ಇದಲ್ಲವೆ?

ಸಂಸ್ಕೃತಿ – ಕುಟುಂಬ ಹಾಗೂ ಮಹಿಳೆಯರ ಪಾತ್ರ ಇವುಗಳಿಗೆ ನೇರವಾದ ಸಂಬಂಧವಿದೆ. ಶ್ರುತಿಯ ವಿಚ್ಛೇದನಾ ಪ್ರಕರಣ ಕುರಿತು ಹಲವು ರೀತಿಯಲ್ಲಿ ಚರ್ಚೆ ನಡೆಯುತ್ತಿದೆ. ಜನಪ್ರಿಯ ನಟಿ, ಹಾಗೂ ಇಂದು ರಾಜಕೀಯ ಪಕ್ಷವೊಂದರ ಪ್ರತಿನಿಧಿಯಾಗಿರುವ ಶ್ರುತಿಯವರ ಬಗ್ಗೆ ಸಾರ್ವಜನಿಕ ಕುತೂಹಲ ಇರುವುದು ಸಹಜವಾದುದು. ಆದರೆ ಈ ಚರ್ಚೆ ಕೇವಲ ಕುತೂಹಲಕ್ಕೆ ಮಾತ್ರ ಸೀಮಿತವಾಗಿಲ್ಲ. ಶ್ರುತಿಯವರ ವಿಚ್ಛೇದನದ ನಿರ್ಧಾರದಿಂದ ಆಕೆಗೆ ಮಹಿಳಾ ಅಭಿವೃದ್ಧಿ ನಿಗಮದ ಅಧ್ಯಕ್ಷೆಯಾಗುವ ಅರ್ಹತೆ ಇದೆಯೇ ಎಂಬ ಪ್ರಶ್ನೆಯನ್ನು ಪಕ್ಷದೊಳಗಿರುವ ಪ್ರಮುಖರು ಎತ್ತುತ್ತಿದ್ದಾರೆ. ಆಕೆಯನ್ನು ನಿಗಮದ ಅಧ್ಯಕ್ಷ ಸ್ಥಾನದಿಂದ ತೆಗೆದು ಹಾಕಬೇಕೆಂಬ ಒತ್ತಡವನ್ನು ಸಹ ಹಾಕುತ್ತಿದ್ದಾರೆ. ಇಂತಹ ವೈಯಕ್ತಿಕ ವಿಚಾರಗಳಲ್ಲಿ ಈ ಕ್ಷೇತ್ರಗಳಲ್ಲಿರುವ ಒಬ್ಬ ಪುರುಷನಿಗೆ ಸಂಬಂಧಪಟ್ಟ ಹಾಗೆ ನಡೆಯುವ ಚರ್ಚೆಗೂ, ಮಹಿಳೆಯನ್ನು ಕುರಿತು ನಡೆಯುವ ಚರ್ಚೆಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕು. ಮಹಿಳೆಯೊಬ್ಬಳು ತನ್ನ ವೈಯಕ್ತಿಕ ಜೀವನಕ್ಕೆ ಸಂಬಂಧಪಟ್ಟಂತೆ ಅದರಲ್ಲೂ ವೈವಾಹಿಕ ಜೀವನಕ್ಕೆ ಸಂಬಂಧಪಟ್ಟಂತೆ ನಿರ್ಧಾರವನ್ನು ತೆಗೆದುಕೊಂಡಾಗ ಬರುತ್ತಿರುವ ಪ್ರತಿಕ್ರಿಯೆಗಳು ಭಾರತೀಯ ಪುರುಷಪ್ರಧಾನ ಮನಸ್ಸುಗಳನ್ನು ಪ್ರತಿಬಿಂಬಿಸುತ್ತವೆ. ಇಂಥ ಪ್ರತಿರೋಧವನ್ನು ಬೆಂಬಲಿಸಿ ಮಾತನಾಡುವ 'ಪ್ರಜ್ಞಾವಂತ' ಸ್ತ್ರೀಯರೂ ಇದ್ದಾರೆ. ಇವರೆಲ್ಲ ಪುರುಷ ಪ್ರಧಾನ ಸಮಾಜವನ್ನು ಒಪ್ಪಿಕೊಂಡವರು ಮತ್ತು ಮುಖ್ಯವಾಗಿ ಮಹಿಳೆಯೊಬ್ಬಳಿಗೆ ದೊರೆತ ಅಧಿಕಾರವನ್ನು ಕಿತ್ತು ತಮ್ಮ ಉಡಿ ತುಂಬಿಕೊಳ್ಳ ಬೇಕೆಂಬ ಮನಸ್ಸುಳ್ಳವರು ಎಂಬುದು ಮೇಲ್ನೋಟಕ್ಕೇ ಎದ್ದು ಕಾಣುತ್ತದೆ.

ಒಳಗಿನ ಪುಟಗಳಲ್ಲಿ....

ನ್ಯಾಯಾಲಯಕ್ಕೆ ಶ್ರುತಿಯವರು ನೀಡಿರುವ ಕಾರಣಗಳನ್ನಾಗಲಿ, ಅದರ ಸತ್ಯಾಸತ್ಯತೆಯ ಬಗ್ಗೆಯಾಗಲಿ, ಆಕೆಯ ಹೊಸ ಬದುಕಿನ ಆಯ್ಕೆಯ ಕುರಿತು ಚರ್ಚಿಸಿ ತೀರ್ಪು ನೀಡುವ ಹಾಗೂ ಆಕೆಯ ಬದುಕನ್ನು ಜಾಲಾಡುವ ಹಕ್ಕು ಮಾಧ್ಯಮದವರಿಗಾಗಲಿ, ಜನರಿಗಾಗಲಿ ಇಲ್ಲ. ಅದು ಆಕೆಯ ವೈಯಕ್ತಿಕ ಬದುಕು. ತನ್ನ ಜೀವನದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಹಕ್ಕು ಆಕೆಗಿದೆ. ಅದನ್ನು ಗೌರವಿಸಬೇಕು. ತಪ್ಪು–ಒಪ್ಪುಗಳ ವಿಚಾರ ಆಕೆಗೆ ಬಿಟ್ಟಿದ್ದು. ಅದರ ಹೊರೆಯನ್ನು ಆಕೆಯೇ ಹೊರಬೇಕಾಗುತ್ತದೆ; ಹೊರುತ್ತಾರೆ.

ಚಲನಚಿತ್ರರಂಗದಲ್ಲಿ, ರಾಜಕೀಯ ಕ್ಷೇತ್ರಗಳಲ್ಲಿ ಪುರುಷರಿಗೆ ಸಂಬಂಧಪಟ್ಟ ಇಂತಹ ವಿಚಾರಗಳು, ಹಗರಣಗಳು ಸದ್ದಿಲ್ಲದೇ ಮುಚ್ಚಿಹೋಗುತ್ತವೆ. ಒಂದು ವೇಳೆ ಪ್ರಚಾರಕ್ಕೆ ಬಂದರೂ, ಅವು ಅವರ ವೃತ್ತಿ ಜೀವನಕ್ಕೆ ಅಡ್ಡ ಗೋಡೆಗಳಾಗುವುದಿಲ್ಲ. ಅವರ ವೈಯಕ್ತಿಕ ಜೀವನವನ್ನು ವೃತ್ತಿಯಿಂದ ಹೊರತು ಪಡಿಸಿ, ಪ್ರತ್ಯೇಕಿಸಿ ನೋಡಲಾಗುತ್ತಿದೆ. ಕೆಲವೊಮ್ಮೆ ಇಂತಹ ಪ್ರಚಾರವೇ ಅವರನ್ನು ಹೆಚ್ಚು ಜನಪ್ರಿಯಗೊಳಿಸಿ ಅವರ ಯಶಸ್ಸಿನ ಮೆಟ್ಟಿಲಾಗುತ್ತದೆ. ಇಂತಹ ನಿದರ್ಶನಗಳು ನಮ್ಮ ಕಣ್ಣೆದುರಿಗಿವೆ. ಕಾಪಾಡಿಕೊಳ್ಳುವ ಉದ್ದೇಶದಿಂದ ತಮ್ಮನ್ನು ಹೊರತುಪಡಿಸಿಕೊಂಡು ಸಂಸ್ಕೃತಿಯ 'ಹರಿಕಾರ'ಳನ್ನಾಗಿ ಬಿಂಬಿಸಿ, ಆಕೆಯ ಮೂಲಭೂತ ಹಕ್ಕುಗಳಿಗೆ ಸಂಚಕಾರ ತರುವ ಪ್ರಯತ್ನವಿದು. ಇದನ್ನು ಬಹುಜಾಣಾಕ್ಷತನದಿಂದ ಕೋಮುವಾದಿ ಪುರುಷಪ್ರಧಾನ ಮನಸ್ಸುಗಳು ಮಾಡುತ್ತಿವೆ. ಮಹಿಳೆಯರನ್ನು ಪುನಃ ಸಂಪ್ರದಾಯಬದ್ಧ ಸಂಕೋಲೆಯ ಬದುಕಿಗೆ ತಳ್ಳುವ ಈ ಒಳಹುನ್ನಾರವನ್ನು ಸೂಕ್ಷ್ಮ ಸಂವೇದನೆಯ ಮನಸ್ಸುಗಳು ಅರಿತು, ಪ್ರತಿಭಟಿಸಬೇಕಿದೆ.

* * *

ಚುನಾವಣೆ ಮುಗಿದಿದೆ. ಮಹಿಳೆಯರಿಗೆ ಶೇ33ರ ಅವಕಾಶದ ಬೇಡಿಕೆ ಮತ್ತೆ ಹಿಂದೂಡಲ್ಪಟ್ಟಿದೆ. ಆದರೆ ಚುನಾವಣೆಗೆ ಸ್ಪರ್ಧಿಸಿದ ಬಹುತೇಕ ಮಹಿಳೆಯರು ಗೆದ್ದು ಬಂದಿದ್ದಾರೆ. ವ್ಯವಸ್ಥೆ ತನ್ನ ಹಿತಾಸಕ್ತಿಯ ಕಾರಣಕ್ಕಾಗಿ ಮೀಸಲಾತಿ ಬೇಡಿಕೆಯನ್ನು ಹಿಂದೆ ತಳ್ಳಿದರೂ, ಈ ಕೋರಿಕೆಯ ಹಿಂದಿರುವ ಪ್ರಾಮಾಣಿಕತೆಯನ್ನು ಜನ ಸಮುದಾಯ ಅರ್ಥಮಾಡಿಕೊಂಡಿದೆ. ಚುನಾವಣೆಗೆ ನಿಂತ ಮಹಿಳೆಯರನ್ನು ಗೆಲ್ಲಿಸಿ ಕಳಿಸಿದ್ದಾರೆ. ಹೀಗಾಗಿ ಈ ಹಿಂದಿನ ಅವಧಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳಾ ಸಂಸದರು ಪಾರ್ಲಿಮೆಂಟ್ ಭವನವನ್ನು ಪ್ರವೇಶಿಸಿದ್ದಾರೆ. ಇದೊಂದು ಗುಣಾತ್ಮಕ ಬೆಳವಣಿಗೆ. ಈಗ ದೊರೆತ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳುವುದು ಮತ್ತು ತಾವು ಪ್ರದರ್ಶನದ ಗೊಂಬೆಗಳಲ್ಲ, ತಮ್ಮ ಸಂಖ್ಯೆ ಅಧಿಕವಾದರೆ ಮಾತ್ರ ಅತ್ಯುತ್ತಮ ಕಾರ್ಯಗಳು ಸಾಧ್ಯವಾಗುತ್ತದೆಂಬುದನ್ನು ಸಾಬೀತು ಮಾಡುವ ಜವಾಬ್ದಾರಿ ಈ ಸಂಸದೆಯರ ಮೇಲೆ ಇದೆ. ಈ ಸೂಕ್ಷ್ಮಗಳು, ಎಚ್ಚರ ಇಟ್ಟುಕೊಂಡೇ ಹೆಜ್ಜೆ ಇಡುವ ಮೂಲಕ ಸ್ತ್ರೀ ರಾಜಕಾರಣದಲ್ಲೂ ಅನಿವಾರ್ಯ ಎಂದು ತೋರಿಸಬೇಕಾಗಿದೆ. ಮತ್ತು ಆ ದಿಕ್ಕಿನಲ್ಲಿ ಸಾಗ ಬಯಸುವ ಇತರರಿಗೂ ಹಾದಿಮಾಡಿಕೊಡಬೇಕಾಗಿದೆ.

* * *

ಕರ್ನಾಟಕ ಲೇಖಕಿಯರ ಸಂಘವು ಪ್ರತಿವರ್ಷ ಹಲವು ಪ್ರಶಸ್ತಿಗಳನ್ನು ಕೊಡುತ್ತದೆ. ಅದರಲ್ಲಿ ಮುಖ್ಯವಾದುದು ಡಾ॥ ಅನುಪಮಾ ನಿರಂಜನರ ಪ್ರಶಸ್ತಿ. ಈ ಸಾಲಿನ ಪ್ರಶಸ್ತಿಯನ್ನು ಹಿರಿಯ ಲೇಖಕಿ ನೀಳಾದೇವಿಯವರು ಪಡೆದುಕೊಂಡಿದ್ದಾರೆ. ಆಕೆಗೆ ಮಾನಸ ಬಳಗವು ಅಭಿನಂದಿಸುತ್ತದೆ. ಇನ್ನಿತರ ದತ್ತಿನಿಧಿ ಪ್ರಶಸ್ತಿಗಳನ್ನೂ, ಉತ್ತಮ ಕೃತಿಗಳಿಗೆ ಬಹುಮಾನಗಳನ್ನೂ ಪಡೆದ ಎಲ್ಲ ಲೇಖಕಿಯರಿಗೂ ಅಭಿನಂದನೆಗಳಿವೆ.

* * *

### 'ಅಂಗ್ ಸಾನ್ ಸೂಕೀ'

ಬರ್ಮಾ ಒಂದು ಪುಟ್ಟದೇಶ. ಭೂಪಟಗಳಲ್ಲಿ ಭಾರತದ ಈಶಾನ್ಯದೆಡೆ ಸಣ್ಣ ಲಾಡಿಯಂತೆ ಕಾಣಸಿಗುವ ಈ ದೇಶ ಮೂಲತಃ ಪ್ರಜಾತಂತ್ರ ಬದ್ಧ. ಆದರೆ, ಇತ್ತೀಚಿನ ಬೆಳವಣಿಗೆಗಳು ಆತಂಕಕಾರಿ. 63 ವರ್ಷದ ಪ್ರಜಾಪ್ರಭುತ್ವ ಪರ ಹೋರಾಟಗಾರ್ತಿ "ಅಂಗ್ ಸಾನ್ ಸೂಕೀ"ಯನ್ನು ಪದಚ್ಯುತಗೊಳಿಸಿ, ಗೃಹಬಂಧನದಲ್ಲಿಟ್ಟು ಎರಡು ದಶಕಗಳೇ ಕಳೆಯುತ್ತಿವೆ. ಇದೇ ಮೇ 26ಕ್ಕೆ 'ಸೂಕೀ' ಸ್ವತಂತ್ರಳಾಗಬೇಕಿತ್ತು. ಆದರೆ, ಪ್ರಜಾಪ್ರಭುತ್ವದ ಹೆಸರಲ್ಲಿ ಚುನಾವಣೆ ನಡೆಸ ಬೇಕಿರುವ ಹಿನ್ನೆಲೆಯಲ್ಲಿ 'ಸೂಕೀ'ಯ ಗೃಹಬಂಧನವನ್ನು ಮತ್ತೆ ಆರು ತಿಂಗಳಿಗೆ ವಿಸ್ತರಿಸಿ, ಅಲ್ಲಿಯ ಪ್ರಸ್ತುತ ಅಧಿಕಾರದ ಚುಕ್ಕಾಣಿ ಹಿಡಿದಿರುವ ಸೇನಾಡಳಿತ 'ಜುಂಟಾ', ಪ್ರಜಾಪ್ರಭುತ್ವ ವಿರೋಧಿಯಾಗಿ ವರ್ತಿಸುತ್ತಿರುವುದಷ್ಟೇ ಅಲ್ಲ, ಮೂಲ ಮಾನವೀಯ ಹಕ್ಕುಗಳನ್ನು ಉಲ್ಲಂಘಿಸಿರುವುದು ಖಂಡನಾರ್ಹ. 'ಸೂಕೀ'ಯ ಬಿಡುಗಡೆಯಾದರೆ ಆಕೆ, ಚುನಾವಣೆಯಲ್ಲಿ ಬಹುಮತಗಳಿಸಿ ಆಡಳಿತ ಸೂತ್ರ ತನ್ನದಾಗಿಸಿಕೊಳ್ಳಬಹುದೆಂಬ ಕಾರಣಕ್ಕೆ ಹತ್ತಿಕ್ಕ ಬಯಸುವ ಸೇನಾಡಳಿತದ ಹುನ್ನಾರ, ವಿಶ್ವಸಂಸ್ಥೆ, ವಿಶ್ವ ಸಮುದಾಯಗಳ ಮಾತನ್ನೂ ಪರಿಗಣಿಸಿಲ್ಲ.

'ಸೂಕೀ' ನೊಬೆಲ್ ಶಾಂತಿ ಪಾರಿತೋಷಕವನ್ನು ಪಡೆದಿದ್ದಾಳೆ. ಇತ್ತೀಚೆಗೆ ಮಹತ್ಮಾಗಾಂಧಿ 'ಶಾಂತಿ ಹಾಗೂ ನ್ಯಾಯ'ದ ಪಾರಿತೋಷಕಕ್ಕೂ ಅರ್ಹಳಾಗಿದ್ದಾಳೆ. ನೆಲ್ಸನ್ ಮಂಡೇಲಾ ಅವರು ಸೆರೆಮನೆಯಲ್ಲಿದ್ದಾಗ ಹೋರಾಟವನ್ನು ಜೀವಂತವಾಗಿಟ್ಟು ಅವರ ಬಿಡುಗಡೆಗೆ ಶ್ರಮಿಸಿದ ಸೂಕೀ ಬಗ್ಗೆ ಮಂಡೇಲಾ ಅವರೇಕೆ ಧ್ವನಿ ಎತ್ತುತ್ತಿಲ್ಲ!

❑



# ಸುತ್ತು ಬಳಸಿನ ಪ್ರಗತಿ : ಸ್ವಾಯತ್ತ ಮಹಿಳಾ ಚಳವಳಿಗಳ ಒಂದು ದಶಕದ ಸಾಧನೆ : ಒಂದು ಕಿರುನೋಟ

● ಅಪೂರ್ವ

ಮಹಿಳಾ ಚಳವಳಿಗಳ ಕಳೆದ ದಶಕದ ಚರಿತ್ರೆ ಕೋಮುವಾದೀಕೃತವಾದ ನವ ಉದಾರವಾದಿ ಭಾರತದ ಸಂದರ್ಭದಲ್ಲಿ ಸಂಭವಿಸಿದ್ದಾಗಿದೆ. ಇಂಥ ಸಂದರ್ಭದಲ್ಲಿ ಭಾರತದಲ್ಲಿನ ಸ್ವಾಯತ್ತ (ಎಂದರೆ ಯಾವ ಪಕ್ಷಕ್ಕೂ ಸೇರಿಲ್ಲವೆಂದು ಸರಳವಾಗಿ ಕರೆಯಲಾಗುವ) ಮಹಿಳಾ ಚಳವಳಿಗಳಲ್ಲಿ ಕೆಲವು ಸಮಸ್ಯೆಗಳ ಬಗ್ಗೆ ನಾವು ತಳೆಯುವ ನಿಲುವುಗಳು, ಸಮಸ್ಯೆಯನ್ನು ಅರ್ಥಮಾಡಿಕೊಳ್ಳುವ ರೀತಿಯಲ್ಲಿ ಎಷ್ಟು, ಹೇಗೆ ಭಿನ್ನವಾಗಿದ್ದೇವೆ ಮತ್ತು ಬೇರೆ ಕೆಲವು ಸಮಸ್ಯೆಗಳ ವಿಷಯದಲ್ಲಿ ಹೇಗೆ ಮೊದಲಿದ್ದಂತೆಯೇ ಇದ್ದೇವೆ ಎಂಬ ಪ್ರಶ್ನೆಗಳು ಕಳೆದ ದಶಕದತ್ತ ನೋಡಿದಾಗ ಹುಟ್ಟಿಕೊಳ್ಳುತ್ತವೆ. ಈ ಬಗ್ಗೆ ಮೊದಲು ಹುಟ್ಟುವ ಪ್ರತಿಕ್ರಿಯೆ ಆಶ್ಚರ್ಯದ್ದು. ಕಾನೂನು ಈಗಲೂ ಎಲ್ಲ ಮಹಿಳಾ ಸಮಸ್ಯೆಗಳಿಗೂ ಉತ್ತರ ನೀಡಬಲ್ಲುದಾಗಿದೆಯೆ? ಒಂದು ಸ್ವಾಯತ್ತ ಮಹಿಳಾ ಚಳವಳಿಗಾರರಾಗಿ ಈಗ ಬದಲಾಗುತ್ತಿರುವ ಮಹಿಳೆಯರ ಅಸ್ಮಿತೆಗಳ, ಲೈಂಗಿಕ ರಾಜಕೀಯ (Sexual Politics) ಹಾಗೂ ಅಸ್ಮಿತೆ (Identity) ರಾಜಕೀಯದ ಸಂದರ್ಭದಲ್ಲಿ ನಾವು ಈ ಬದಲಾದ ಅಸ್ಮಿತೆಗಳ ಜಾಡನ್ನು ಅನುಸರಿಸಬಲ್ಲೆವೆ? ಇಂದಿನ ಬಹುತೇಕ "ಸ್ತ್ರೀವಾದೋತ್ತರ" (Post-Feminist) ಎನ್ನಿಸುತ್ತಿರುವ ಪ್ರಪಂಚದಲ್ಲಿ ಸ್ವಾಯತ್ತ ಮಹಿಳಾ ಗುಂಪುಗಳಾಗಿ ನಾವು ಇಂದಿಗೂ ಪ್ರಸ್ತುತವಾಗಿದ್ದೇವೆಯೆ? ದುಡಿವ ವರ್ಗದ ಮಹಿಳೆಯರಿಗೆ ಸ್ಪಂದಿಸಲು ನಮಗೆ ಸಾಧ್ಯವಾಗುತ್ತಿದೆಯೆ? ಅಥವಾ ಮೇಲ್ವರ್ಗದ ನಗರಕೇಂದ್ರಿತ ಉಚ್ಚ ಮಹಿಳೆಯರೆಂದು ನಮ್ಮ ಮೇಲೆ ಹೊರಿಸಲಾಗುವ ಆರೋಪಗಳಲ್ಲಿ ಈಗಲೂ ಅರ್ಥವಿದೆಯೆ?

ಮುಂಬಯಿನಲ್ಲಿರುವ ಮಹಿಳಾ ಶೋಷಣಾ ವಿರೋಧಿ ವೇದಿಕೆ (women against oppression) ಎಂಬ ಸ್ವಾಯತ್ತ ಮಹಿಳಾ ಸಂಘಟನೆಯ ಸದಸ್ಯೆ ನಾನು. ನನ್ನ ಈ ಪ್ರಬಂಧ ದೆಹಲಿ ಮತ್ತು ಮುಂಬಯಿಗಳಲ್ಲಿರುವ ಸ್ವಾಯತ್ತ ಮಹಿಳಾ ಚಳವಳಿಗಳಿಗಷ್ಟೇ ಸೀಮಿತವಾಗಿದೆ. ಈಶಾನ್ಯ ಭಾರತದ ರಾಜ್ಯಗಳ ಸಂಘಟನೆಗಳು ಸರ್ಕಾರಗಳಿಂದ ಮಹಿಳೆಯರ ಮೇಲೆ ಆಗುತ್ತಿರುವ ಹಿಂಸಾಚಾರಗಳಿಗೆ ಪ್ರತಿಕ್ರಿಯಿಸುವಲ್ಲಿ ನಿರಂತರ ಸಂಘರ್ಷಣೆಯ ಅನುಭವದಲ್ಲೇ ಉಳಿದಿವೆ. ಪಶ್ಚಿಮ ಬಂಗಾಳದಲ್ಲಿ ತಥಾಕಥಿತ ಪ್ರಗತಿಪರ ಸರ್ಕಾರವಿದ್ದರೂ ಅಲ್ಲೂ ಮಹಿಳೆಯರ ಅನುಭವ ಕ್ಷೇಮಕರವಾಗೇನೂ ಇರುವ ಮಾಹಿತಿ ದೊರೆಯುವುದಿಲ್ಲ. ಬಹುಶಃ ದೇಶದ ಮಹಿಳಾ ಹೋರಾಟಗಾರ ಗುಂಪುಗಳ ಸಂಪರ್ಕ ಕಡಿದುಹೋಗಿರುವುದಕ್ಕೆ ಇದೂ ಒಂದು ಕಾರಣ.

ವಿಶೇಷತಃ ಭಾರತದಂಥ ಸಂಪ್ರದಾಯಸ್ಥ ಸಮಾಜಗಳಲ್ಲಿ ಕಾನೂನು ಹೆಚ್ಚಿನ ಮುನ್ನೋಟವನ್ನು ಹೊಂದಿರಬೇಕಾದ್ದು ಅತ್ಯವಶ್ಯಕ. ಕಾನೂನುಗಳಲ್ಲಿ ಸುಧಾರಣೆಗಾಗಿ ಪ್ರಚಾರ ಮಾಡುವುದೂ ಈ ಸ್ವಾಯತ್ತ ಮಹಿಳಾ ಚಳವಳಿಗಳಲ್ಲಿ ಅಂತರ್ಗತವಾಗಿರುವ ಒಂದು ಅಂಶವೇ ಆಗಿದೆ. ಕಳೆದ ದಶಕವು ಪ್ರಾರಂಭವಾದದ್ದೇ ವಿಶಾಖಾ V/s ರಾಜಸ್ಥಾನ ಸರ್ಕಾರದ ಕೇಸಿನಲ್ಲಿ ಹೊರಬಿದ್ದ ಒಂದು ಮೈಲಿಗಲ್ಲಿನಂಥ ತೀರ್ಪಿನ ಮೂಲಕ. ಸುಪ್ರೀಂಕೋರ್ಟ್ ದುಡಿಮೆ ಕ್ಷೇತ್ರದಲ್ಲಿನ ಲೈಂಗಿಕ ಹಿಂಸೆ ಎಂಬುದನ್ನು ಯೋಚಿಸಿ ಆ ಬಗ್ಗೆ ಯಾವ ಕ್ರಮವನ್ನು ಜರುಗಿಸಬೇಕೆಂಬ ಮಾರ್ಗನಿರ್ದೇಶನವನ್ನು ನೀಡಿತು. ಲೈಂಗಿಕ ಕಿರುಕುಳವನ್ನು ಕಾನೂನು ಒಂದು ಅಪರಾಧವೆಂದು ಗುರುತಿಸಿದೆ ಎನ್ನುವುದೇ ಮಹಿಳಾ ಚಳವಳಿಗಳಿಗೆ ಸಿಕ್ಕ ಒಂದು ಜಯವಾಗಿದೆ. ಲೈಂಗಿಕ ಕಿರುಕುಳವು ಮಹಿಳೆಯರ ವಿರುದ್ಧವಾದ ಗಂಭೀರವಾದ ಅಪರಾಧ, ಅದು ಬರೀ ಹುಡುಗಿಯರನ್ನು ಛೇಡಿಸುವಂಥ ಹುಡುಗಾಟಿಕೆಯಲ್ಲ ಎಂದು ಗುರುತಿಸಿರುವುದು ವಾಸ್ತವದಲ್ಲಿ ಹೇಳಲಾಗದ ಮಹತ್ವದ ವಿಜಯವೇ ಸರಿ. ಸುಪ್ರೀಂಕೋರ್ಟಿನ ಈ ತೀರ್ಪು ಶಾಸನಬದ್ಧ ಕಾನೂನು ಆಗುವುದಕ್ಕೆ ಪೂರ್ವಭಾವಿಯಾದ ಸೂಚನೆಯಷ್ಟೆ ಆಗಿದ್ದು ಈ ಬಗ್ಗೆ ಇನ್ನೂ ಕಾನೂನು ರೂಪುಗೊಳ್ಳಬೇಕಾಗಿದೆ. ಲೈಂಗಿಕ ದೌರ್ಜನ್ಯದ ಆರೋಪದ ಸಂದರ್ಭಗಳಲ್ಲಿ ಕಾನೂನು ಅನುಸರಿಸಬೇಕಾದ ಸೂಕ್ತಕ್ರಮಗಳನ್ನು ಹೇಗೆ ಸತ್ವಹೀನವನ್ನಾಗಿ ಮಾಡುತ್ತದೆ ಹಾಗೂ ತನಿಖೆ ಸಮಿತಿಗಳ ಮೂಲಕ ಎಂಥ ತನಿಖೆ ಕ್ರಮಗಳನ್ನು ರೂಪಿಸುವುದನ್ನೂ ಅದು ಒಳಗೊಂಡಿರುತ್ತದೆ ಎಂಬುದು ಮುಖ್ಯ. ಸಮರ್ಪಕವೂ ಸ್ಥಿರವೂ ಆದ ಕಾನೂನು ಕೌಟುಂಬಿಕ ತನಿಖೆಗಳನ್ನು ಇತರ ರೀತಿಯ ದುರ್ವ್ಯವಹಾರಗಳ ಸಂದರ್ಭಗಳಲ್ಲೂ ವ್ಯವಸ್ಥಿತವಾಗಿ ನಿಯಂತ್ರಿಸುವ ವಿಷಯವನ್ನೂ ಕೈಗೆತ್ತಿಕೊಳ್ಳಬೇಕಾದ್ದಿದೆ. ಕಾನೂನು ಸೈದ್ಧಾಂತಿಕವಾಗಿ ಹೇಳುವ ಸಹಜನ್ಯಾಯದ ತತ್ತ್ವಗಳಿಗೆ ಮಹಿಳಾ ಸಂದರ್ಭಗಳಲ್ಲಿ ಅಪವಾದಗಳೆಂದು ಪರಿಗಣಿಸುವುದರ ಸೂಚಿತ ಪರಿಣಾಮಗಳೇನು ಎಂಬುದನ್ನು ಗಂಭೀರವಾಗಿ ಲೆಕ್ಕಕ್ಕೆ ತೆಗೆದುಕೊಳ್ಳಬೇಕು, ಉದಾಹರಣೆಗೆ

ಹಿಂಸಾಚಾರದ ಆರೋಪ ಹೊತ್ತ ವ್ಯಕ್ತಿಯ ವಿಚಾರಣೆಯಲ್ಲಿ ಆರೋಪ ಹೊರಿಸಿದ ಮಹಿಳೆಯ ಪಾಟೀಸವಾಲನ್ನು ನಿರ್ವಹಿಸಲು ತನಿಖೆ ಅವಧಿಯಲ್ಲಿ ಅವಳನ್ನು ಇನ್ನಷ್ಟು **ಬೆದರಿಕೆಗೆ ಗುರಿ ಮಾಡಿಲ್ಲ** ಎಂಬುದನ್ನೂ ಖಚಿತಪಡಿಸಿಕೊಳ್ಳುವುದು ಅತ್ಯವಶ್ಯಕ.

ಮಹಿಳಾ ಸಂಘಟನೆಗಳಲ್ಲಿ ಈ ವಿಷಯವಾಗಿ ನಡೆದ ಚರ್ಚೆ, ವಾಗ್ವಾದಗಳಲ್ಲಿ, ರಾಷ್ಟ್ರೀಯ ಮಹಿಳಾ ಆಯೋಗದೊಂದಿಗೆ ನಡೆಸಿದ ಚರ್ಚೆಗಳ ಮೂಲಕವೂ ಈ ಪ್ರಶ್ನೆಯ ನಿರ್ವಹಣೆಗೆ ಒದಗುವಂಥ ಒಮ್ಮತದ ಒಂದು ಠರಾವನ್ನು ರೂಪಿಸಲಾಯಿತು. ಈ ಚರ್ಚೆಗಳು ಮಹಿಳೆಯರ ಎಲ್ಲ ಸಮಸ್ಯೆಗಳ ಸಂಘಟಿತ–ಅಸಂಘಟಿತ ಕ್ಷೇತ್ರಗಳೆಲ್ಲ ವನ್ನೂ ವ್ಯಾಪಕವಾಗಿ ಒಳಗೊಳ್ಳುವ ರೀತಿಯಲ್ಲಿ ಈ ಠರಾವನ್ನು ರಚಿಸ ಬೇಕಾದ ಸವಾಲನ್ನು ಮುಂದೊಡ್ಡಿದವು. ದುಡಿಮೆ ವಲಯದ ಬಗ್ಗೆಯೂ ಸ್ವಾಯತ್ತ ಮಹಿಳಾ ಗುಂಪುಗಳ ಮಹಿಳೆಯರಿಗೂ, ತಮ್ಮನ್ನು 'ಎಡಪಂಥ' ದೊಂದಿಗೆ ಜೋಡಿಸಿಕೊಂಡವರು ಎಂದುಕೊಳ್ಳುವ ಮಹಿಳೆಯರಿಗೂ ಇರುವ ಭಿನ್ನಾಭಿಪ್ರಾಯಗಳ ಬಗ್ಗೆ ನಮ್ಮ ತಿಳಿವಳಿಕೆ ಎಷ್ಟು ಪರಿಮಿತ ವಾದುದು ಎಂಬುದನ್ನೂ ಈ ಚರ್ಚೆಗಳು ತೋರಿಸಿಕೊಟ್ಟವು.

ಲೈಂಗಿಕ ಕಿರುಕುಳದ ಆರೋಪವನ್ನು ಇನ್ನು ಮುಂದೆ ಟ್ರೇಡ್ ಯೂನಿಯನ್ನುಗಳ ಪುರುಷ ನಾಯಕರನ್ನು ಬಲಿಪಶುಗಳನ್ನಾಗಿಸು ವುದಕ್ಕೂ ಬಳಸಿಕೊಳ್ಳಬಹುದು ಎಂಬ ಸಾಧ್ಯತೆಯನ್ನು ಟ್ರೇಡ್ ಯೂನಿಯನ್ನುಗಳ ಸ್ತ್ರೀಯರೂ ಪುರುಷರೂ ವಾದಿಸಿದರು. ದುಡಿಯುವ ಜಾಗದಲ್ಲಿ ಸ್ತ್ರೀಯರನ್ನು ಲೈಂಗಿಕ ಕಿರುಕುಳಕ್ಕೆ ಒಳಗುಮಾಡುವುದು ತೀರಾ ಯಾಂತ್ರಿಕ/ ಸಲೀಸಾದ ಕ್ರಿಯೆಯಾಗಿಬಿಟ್ಟಿದೆ. ಮಹಿಳಾ ಮ್ಯಾನೇಜರ್‌ಗಳನ್ನು ಶಾಪ್ ಶುಚಿಗೊಳಿಸುವ ಕ್ಲೀನರ್ ಗಂಡಸರು ಕೂಡ ಬೆದರಿಸಬಲ್ಲರು ಎಂಬ ಸಮಸ್ಯೆಯ ವಾಸ್ತವತೆಯನ್ನು ಆ ಟ್ರೇಡ್ ಯೂನಿಯನ್ ವಾದಿಗಳು ಸಂಬೋಧಿಸಲೇ ಬೇಕಾಗಿತ್ತು. ಆದರೆ (ಕಾನೂನಿನ ದುರ್ಬಳಕೆಯ) ಚರ್ಚೆಯಲ್ಲಿ ಆ ಮುಖ್ಯ ವಿಷಯವೇ ಕಳೆದುಹೋಯಿತು. ಲೈಂಗಿಕ ಕಿರುಕುಳಗಳು, ವಿಶೇಷವಾಗಿ ಕಾರ್ಖಾನೆಗಳ ಮಹಿಳಾ ಕಾರ್ಮಿಕರ ಸಂದರ್ಭಗಳಲ್ಲಿ, ಮ್ಯಾನೇಜರುಗಳು, ಸೂಪರ್‌ವೈಸರುಗಳಿಂದ ಉಂಟಾಗುವ ಕಿರುಕುಳಗಳು ಎಷ್ಟೊಂದು ಬಹುರೂಪದ್ದಾಗಿರಬಹುದು ಎಂಬುದನ್ನೇ ಇನ್ನೂ ನಾವು ಪೂರ್ತಿ ಅರ್ಥಮಾಡಿಕೊಂಡಿಲ್ಲ. ಹೆಚ್ಚಿನ ಓವರ್ ಟೈಂ ಅವಕಾಶ ಪಡೆಯಲು, ರಜೆ ಮಂಜೂರು ಮಾಡಿಸಿಕೊಳ್ಳಲು ಇಲ್ಲವೆ ತಮ್ಮನ್ನು ಕೆಲಸದಿಂದ ಕಿತ್ತುಹಾಕದಿರುವುದಕ್ಕಾಗಿ ಮಹಿಳಾ ಕಾರ್ಮಿಕರು ತಮ್ಮನ್ನು ತಾವೇ ಲೈಂಗಿಕ ಕಿರುಕುಳಗಳಿಗೆ ಒಡ್ಡಿಕೊಳ್ಳಬೇಕಾದ ಸ್ಥಿತಿ ಇದೆ. ಇದೊಂದು ಪ್ರಬಲವಾದ ವಾಸ್ತವಾಂಶವಾಗಿದ್ದು ಮಹಿಳಾ ಚಳವಳಿಗಳು ಇದನ್ನು ಎದುರಿಸಲೇ ಬೇಕಾಗಿದೆ ಎಂಬುದನ್ನು ಒಪ್ಪಿದಲ್ಲಿ ಈ ಲೈಂಗಿಕ ಕಿರುಕುಳಗಳ ನಿಷೇಧದ ಚರ್ಚೆ ಕಾರ್ಮಿಕವರ್ಗದ ಮಹಿಳೆಯರ ಸ್ಥಿತಿಯನ್ನು ಇನ್ನಷ್ಟು ವ್ಯಾಪಕವಾಗಿ ಅರ್ಥ ಮಾಡಿಕೊಳ್ಳುವುದಕ್ಕೂ, ಅದರ ಪರಿಹಾರಕ್ಕೆ ತಕ್ಕುದಾದ ಅಸ್ತ್ರಗಳನ್ನು ಸಿದ್ಧಮಾಡಿಕೊಳ್ಳಲಿಕ್ಕೂ ನೆರವಾಗಬಲ್ಲದು.

ಆದರೆ ಪ್ರಸ್ತುತದಲ್ಲಿ ಮಹಿಳಾಚಳವಳಿಯು ಕಾರ್ಮಿಕವರ್ಗದ ಮಹಿಳೆಯರ ಜೀವನದಿಂದ ಎಷ್ಟು ದೂರ ಹೋಗಿದೆ ಎಂದರೆ ಅವರ ಸ್ಥಿತಿಗತಿಗಳು ತೀರಾ ಶೋಚನೀಯ (ಉದಾಹರಣೆಗೆ ಗಾರ್ಮೆಂಟ್ ಉದ್ಯಮದ ಕಾರ್ಖಾನೆಗಳಲ್ಲಿ ದುಡಿಯುವ ಮಹಿಳೆಯರ ಸ್ಥಿತಿ) ಎಂಬ ಒಂದು ಊಹೆಯ ಆಚೆಗೆ ಅವರ ಸ್ಥಿತಿಗತಿಗಳ ನೈಜ ಅರಿವು ನಮಗೆ ಇಲ್ಲವಾಗಿದೆ. 1990ರ ದಶಕದ ಮಧ್ಯದವರೆಗೂ ಮಹಿಳಾ ಗುಂಪುಗಳಿಗೆ ಸೇರಿದ ಸಂಶೋಧನಾಕಾರರು ಕಾರ್ಖಾನೆಗಳ ಕಾರ್ಮಿಕ ಮಹಿಳೆ ಯರನ್ನು ಕುರಿತು ಅಧ್ಯಯನಗಳನ್ನು ನಡೆಸುತ್ತಿದ್ದರು. ಆದರೆ ಈ




ದಶಕದ ಕೊನೆಯ ಹೊತ್ತಿಗೆ ಕಾರ್ಖಾನೆಗಳಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ದುಡಿಯತೊಡಗಿದ ವಾಸ್ತವಾಂಶವಿದ್ದರೂ ಆ ಬಗ್ಗೆ ಯಾವ ಅಧ್ಯಯನವೂ ನಡೆದಿಲ್ಲ. ವ್ಯಾವಹಾರಿಕ ಜಗತ್ತನ್ನು ನಾವು ತಿಳಿದುಕೊಂಡಿರುವಂತೆ, ಉನ್ನತ ಪ್ರೊಫೈಲ್ ಕಾರ್ಪೊರೇಟ್‌ಗಳಲ್ಲಿ, ಮಾಹಿತಿ ತಂತ್ರಜ್ಞಾನದ ಉದ್ಯೋಗಗಳಲ್ಲಿ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ದೊಡ್ಡ ಮೊತ್ತದ ಹಣವನ್ನು ಸಂಪಾದಿಸುತ್ತಿರುವವರೂ ತಮ್ಮನ್ನು ಪಿತೃಪ್ರಧಾನ ವ್ಯವಸ್ಥೆಯಿಂದ ಶೋಷಿತರೆಂದು ನೋಡಲು ಇಷ್ಟ ಪಡುವುದಿಲ್ಲ. ಏಕೆಂದರೆ ತಮ್ಮ ಕೆರಿಯರ್, ಉದ್ಯೋಗಗಳು, ಮದುವೆಗಳು, ಮಕ್ಕಳು ಹೇಗಿರಬೇಕು ಎಂದು ತಮ್ಮ ಆಯ್ಕೆಯಂತೆಯೇ ಹೊಂದಬಲ್ಲವರು ಅವರು. ಈ ಪ್ರಕ್ರಿಯೆಯಲ್ಲಿ ದೇಶದ ಒಟ್ಟು ಕಾರ್ಮಿಕಶಕ್ತಿಯಲ್ಲಿ ಇಂದಿಗೂ ಬಲುದೊಡ್ಡ ಪ್ರಮಾಣದಲ್ಲಿರುವ ಕಾರ್ಮಿಕ ವರ್ಗದ ಮಹಿಳೆಯರನ್ನು ನಾವು ಪೂರ್ತಿ ನಿರ್ಲಕ್ಷಿಸಿ ಬಿಟ್ಟಿದ್ದೇವೆ.

ಕಳೆದ ಎರಡು ಮೂರು ವರ್ಷಗಳಲ್ಲಿ ಮಹಿಳಾ ಚಳವಳಿಯು ಪ್ರಜ್ಞಾಪೂರ್ವಕವಾಗಿ ತನ್ನನ್ನು ತೊಡಗಿಸಿಕೊಳ್ಳಲು ಯತ್ನಿಸಿರುವ ಒಂದು ದುಡಿಮೆಗಾರ ಮಹಿಳಾವರ್ಗ ಎಂದರೆ ಲೈಂಗಿಕ ಕಾರ್ಯಕರ್ತೆಯರದು. ಲೈಂಗಿಕ ದುಡಿಮೆ ಎಂಬುದನ್ನು ನಾವು ಇಂದು ಅರ್ಥಮಾಡಿಕೊಳ್ಳುವ ಕ್ರಮವೇ ತೀವ್ರವಾಗಿ ಬದಲಾದದ್ದಾಗಿದೆ. 'ವೇಶ್ಯಾವೃತ್ತಿ'ಯ ಎಲ್ಲ ರೂಪ ಗಳನ್ನೂ ಹಿಂದೆ ಹಿಂಸಾಚಾರವೆಂದೂ, ಮಹಿಳಾ ಶೋಷಣೆಯೆಂದೂ ನೋಡುತ್ತಿದ್ದ ರೀತಿಯಿಂದ ನಾವೀಗ ಸಾಕಷ್ಟು ಚಲಿಸಿದ್ದೇವೆ. ಮಹಿಳೆಯರು ತಮ್ಮ ಜೀವನೋಪಾಯಕ್ಕಾಗಿ ಮಾಡಿಕೊಂಡಿರುವ ಒಂದು ದಾರಿ ಅದು ಎಂದು ನಾವೀಗ ಒಪ್ಪಿದ್ದೇವೆ. ಈ ಬದಲಾವಣೆಗೆ ಲೈಂಗಿಕ ಕಾರ್ಯಕರ್ತೆಯರು ಜಾಗತಿಕವಾಗಿಯೂ, ರಾಷ್ಟ್ರೀಯವಾಗಿಯೂ ನಡೆಸುತ್ತಿರುವ ಚಳವಳಿಗಳು ಮತ್ತು ಅವರು ಈಗ ತಮ್ಮದೇ ಹಕ್ಕುಗಳ ಬಗ್ಗೆ ಮಾತನಾಡತೊಡಗಿರುವುದೂ ಮುಖ್ಯ ಕಾರಣವಾಗಿದೆ. ಆದರೆ ನಮ್ಮ ನಿಲುವಿನಲ್ಲಾಗಿರುವ ಈ ಪರಿವರ್ತನೆ ಸರಳರೇಖೆಯ ರೀತಿಯ ದಲ್ಲ. ದಲಿತ ಮಹಿಳಾ ಗುಂಪುಗಳು ಲೈಂಗಿಕ ದುಡಿಮೆಯೂ ಸೇರಿದಂತೆ ಜಾತಿ ಆಧರಿತ ದುಡಿಮೆಗಳೆಲ್ಲದರ ಬಗ್ಗೆಯೂ ಪ್ರಶ್ನೆಗಳನ್ನೆತ್ತಿರುವುದರಿಂದ ನಮ್ಮ ಅರ್ಥೈಸುವಿಕೆಯಲ್ಲಿ ಸೂಕ್ಷ್ಮ ಭಾವನಾಛಾಯೆಗಳು ಏರ್ಪಟ್ಟಿವೆ.

ಹೀಗೆಂದಾಗ, ಲೈಂಗಿಕ ಕಾರ್ಯಕರ್ತೆಯರ ಹೋರಾಟಗಳನ್ನು ಎಲ್ಲಾ ಮಹಿಳಾ ಗುಂಪುಗಳೂ ಬೆಂಬಲಿಸುತ್ತಿವೆ ಎಂದೇನೂ ಅರ್ಥವಲ್ಲ, ಈ ಕಾರ್ಯಕರ್ತೆಯರ ಮಕ್ಕಳು ಮತ್ತು ವೇಶ್ಯಾವೃತ್ತಿಯು ಮಹಿಳಾ ಶೋಷಣೆಯೆಂದೇ ತಿಳಿಯುವ ಲೈಂಗಿಕ ಕಾರ್ಯಕರ್ತೆಯರ ಜೊತೆ ಕೆಲಸ ಮಾಡುತ್ತಿರುವ ಅನೇಕ ಗುಂಪುಗಳಿವೆ. ಲೈಂಗಿಕತೆ ಬಗೆಗಿನ ನೈತಿಕಧೋರಣೆಯು ಇಂಥ ದುಡಿಮೆಯ ಸುತ್ತ ಅನನುಕೂಲತೆಯನ್ನು ಉಂಟುಮಾಡುತ್ತದೆ. ಸೆಕ್ಸ್ ಅಥವ ಲೈಂಗಿಕ ಸಂವಾದಗಳು

ರೊಮ್ಯಾಂಟಿಕ್/ಭಾವನಾತ್ಮಕ ಸಂದರ್ಭಗಳ ಆಚೆಗೂ ಅಸ್ತಿತ್ವಹೊಂದಿರಬಲ್ಲವು ಎಂಬುದನ್ನು ಪ್ರಗತಿಪರವೆನಿಸಿ ಕೊಳ್ಳುವ ಚಳವಳಿ ನಿರತ ಮಹಿಳಾ ಗುಂಪುಗಳೂ ಸೇರಿದಂತೆ ಎಷ್ಟೋ ಚಳವಳಿಗಳೂ ಒಪ್ಪಲು ತಯಾರಿಲ್ಲ.

ಲೈಂಗಿಕ ಕಾರ್ಯಕರ್ತೆಯರೊಂದಿಗೆ ಕೆಲಸ ಮಾಡುವ ಹಲವಾರು ಮಹಿಳಾ ಗುಂಪುಗಳು ಅವರ ಬೇಡಿಕೆ/ ಹಕ್ಕೊತ್ತಾಯಗಳನ್ನು ಸೂತ್ರೀಕರಿಸುವುದರಲ್ಲಿ ಅವರನ್ನು ಸಾಮೂಹಿಕವಾಗಿಸಲು ಹಲವು ರೀತಿಗಳಲ್ಲಿ ಯತ್ನಿಸುತ್ತಿವೆ. ಕೊಲ್ಕತ್ತಾದ DMSC, ಸಾಂಗ್ಲಿ ಯಲ್ಲಿರುವ VAMP, ಬೆಂಗಳೂರಿನ 'ಕರ್ನಾಟಕ ಲೈಂಗಿಕ ಕಾರ್ಯಕರ್ತೆಯರ ಒಕ್ಕೂಟ' ಮತ್ತು 'ಸಾಧನೆ' ಮಹಿಳಾ ಗುಂಪು ಮುಂತಾದವು ಇಂಥ ಯತ್ನಗಳಲ್ಲಿ ತೊಡಗಿರುವ ಸಂಘಟನೆಗಳು. ಇತ್ತೀಚೆಗೆ ITPA ಗೆ ತರಲಾಗಿರುವ ಪರಿಷ್ಕರಣೆಗಳ ಬಗ್ಗೆ ಈ ಗುಂಪುಗಳವರು ಎತ್ತಿರುವ ಆಕ್ಷೇಪಣೆಗಳಿಗೆ ಸ್ವಾಯತ್ತ ಮಹಿಳಾ ಗುಂಪುಗಳ ರಾಷ್ಟ್ರೀಯ ನೆಟ್‌ವರ್ಕ್ ಕೂಡ ಬೆಂಬಲ ವ್ಯಕ್ತಪಡಿಸಿದೆ. ಮಹಾರಾಷ್ಟ್ರದಲ್ಲಿ ಮಹಿಳೆಯರು ಬಾರ್‌ಗಳಲ್ಲಿ ನರ್ತಿಸುವುದನ್ನು ನಿಷೇಧಿಸಿದ್ದರ ವಿರುದ್ಧವಾಗಿ ಬಾರ್ ಡ್ಯಾನ್ಸರ್ಸ್ ಯೂನಿಯನ್ ಪ್ರತಿಭಟಿಸಿದಾಗ ಮಹಿಳಾ ಶೋಷಣಾ ವಿರೋಧಿ ವೇದಿಕೆಯೂ ಒಳಗೊಂಡಂತೆ ಅನೇಕ ಮಹಿಳಾಗುಂಪುಗಳು (ಆ ಕಾಯ್ದೆಯ ತಿದ್ದುಪಡಿ ವಿರುದ್ಧ) ಪ್ರತ್ಯೇಕ ಪಿಟಿಷನ್ನುಗಳನ್ನು ಸಲ್ಲಿಸಿ ಪ್ರತಿಭಟಿಸಿದ್ದವು. ಲೈಂಗಿಕ ಕಾರ್ಯಕರ್ತ ಮಹಿಳೆಯರ ಸಮಸ್ಯೆಗಳೊಂದಿಗೆ ಮಹಿಳಾ ಚಳವಳಿಗಳು ತಮ್ಮನ್ನು ತೊಡಗಿಸಿಕೊಳ್ಳುತ್ತಿರುವ ರೀತಿಗೆ ಇದು ನಿದರ್ಶನವಾಗಿದೆ. ಈ ಎಲ್ಲ ಬೆಳವಣಿಗೆಗಳೂ 2006ರಲ್ಲಿ ಕೊಲ್ಕತ್ತ ನಗರದಲ್ಲಿ ನಡೆದ ಏಳನೆಯ ಅಂತರರಾಷ್ಟ್ರೀಯ ಮಹಿಳಾ ಸಮ್ಮೇಳನದಲ್ಲಿ ಲೈಂಗಿಕ ದುಡಿಮೆಯನ್ನು ಕುರಿತು ಪ್ರತ್ಯೇಕಗೋಷ್ಠಿಯೊಂದನ್ನು ಏರ್ಪಡಿಸುವುದಕ್ಕೆ ಮೂಲ ಕಾರಣವಾದವು. ಆ ಗೋಷ್ಠಿಯು ಎತ್ತಿಕೊಂಡ ಪ್ರಶ್ನೆಗಳು ಇಡೀ ಸಮ್ಮೇಳನವನ್ನೇ ತಮ್ಮ ಹಿಡಿತಕ್ಕೆ ತೆಗೆದುಕೊಂಡವು.



ಮಹಿಳಾ ಚಳವಳಿಗಳು ಇಂಥ ಪ್ರತಿಯೊಂದು ಸಮ್ಮೇಳನದಲ್ಲೂ ಒಂದೊಂದು ಹೊಸ ಸಮಸ್ಯೆಗಳತ್ತ ಕೇಂದ್ರೀಕರಿಸುತ್ತಲೇ ಬಂದಿವೆ. ಕ್ಯಾಲಿಕಟ್ ಸಮ್ಮೇಳನದಲ್ಲಿ ಏಕಾಕಿ ಮಹಿಳೆಯರ ಸಮಸ್ಯೆ, ರಾಂಚಿ ಸಮ್ಮೇಳನದಲ್ಲಿ ಲೆಸ್ಬಿಯನ್ ಮಹಿಳೆಯರ ಸಮಸ್ಯೆ ಮುಂದೆ ಬಂದಿದ್ದವು. ರಾಂಚಿ ಸಮ್ಮೇಳನದ ಅನಂತರ ದ್ವಿಲಿಂಗಿಗಳಾದ ಮಹಿಳೆಯರ ಸಮಸ್ಯೆಗಳು ಕಳೆದ ಹತ್ತುವರ್ಷಗಳಲ್ಲಿ ಹೆಚ್ಚು ಮುಂಚೂಣಿಗೆ ಬರತೊಡಗಿವೆ. ಲೈಂಗಿಕತೆ ಮತ್ತು ಭಿನ್ನಲಿಂಗ ಸಂಬಂಧವೇ ಸಹಜ ನಿಯಮವಾಗಿರುವುದರ ಸುತ್ತಲೂ ನಡೆದಂಥ ಚರ್ಚೆಗಳು ಎಷ್ಟು ಸಮೃದ್ಧವಾಗಿದ್ದವೆಂದರೆ ಈ ವಿಲಕ್ಷಣ ಚಳವಳಿಯು ಸ್ತ್ರೀವಾದಿ ಮಹಿಳಾ ಚಳವಳಿಯೊಳಕ್ಕೆ ಬಂದದ್ದರಿಂದ ಪಿತೃಪ್ರಾಧಾನ್ಯವನ್ನು ಇನ್ನೂ ಚೆನ್ನಾಗಿ ಅರ್ಥಮಾಡಿಕೊಳ್ಳಲು ಅದು ಸಹಾಯ ಮಾಡಿದೆ. ನಮ್ಮ ದೇಹಗಳು, ಲೈಂಗಿಕ ದುಡಿಮೆ, ಸೆಕ್ಸ್ ವರ್ಕ್ ಮುಂತಾದುವನ್ನು ಕುರಿತ ಚರ್ಚೆಯನ್ನು ವಿಸ್ತರಿಸಲಿಕ್ಕೆ ಇದು ಬಹುದೊಡ್ಡ ಕಾಣಿಕೆ ಸಲ್ಲಿಸಿದೆ.

ಮಹಿಳಾ ಚಳವಳಿಯಲ್ಲಿ ಸಲಿಂಗ ಸಂಬಂಧಗಳ ಹಾಗೂ ಅಂಚಿನ ನೆಲೆಯ ಲೈಂಗಿಕತೆಗಳನ್ನು ಕುರಿತ ಸಮಸ್ಯೆಗಳನ್ನು ಚಳವಳಿಯ ಕೇಂದ್ರಕ್ಕೆ ತರುವುದು ಸುಲಭದ ಹಾದಿಯಾಗಿರಲಿಲ್ಲ. ಲೆಸ್ಬಿಯನ್ ಗುಂಪುಗಳು, ಅವರ ಸಮಸ್ಯೆಗಳನ್ನು ಬೆಂಬಲಿಸುವ ಗುಂಪುಗಳು ತಮ್ಮ ಹೆಸರುಗಳಿಂದ ಹಿಡಿದು ತಮ್ಮ 'ರಾಜಕೀಯ'ವನ್ನು ಪ್ರಶ್ನಿಸುವ ಧೋರಣೆವರೆಗೂ ಸ್ಪಷ್ಟವಾಗಿ ತಮ್ಮನ್ನು ನಿರ್ವಚಿಸಿಕೊಳ್ಳಬೇಕಾದ್ದು ಅವಶ್ಯಕವಾಗಿತ್ತು. 2001ರಷ್ಟು ಈಚೆಗಿನವರೆಗೂ ದೆಹಲಿಯಲ್ಲಿನ ಎಡಪಕ್ಷಗಳಿಗೆ ಸೇರಿದ ಮಹಿಳಾ ಗುಂಪುಗಳು ಮಾರ್ಚ್ 8ರ ರ್‍ಯಾಲಿಯಲ್ಲಿ CALERI (Campaign for Lesbian Right ಎಂಬ ಗುಂಪು) ಬ್ಯಾನರ್ ಕೂಡ ಜೊತೆಗೂಡಿದರೆ ತಮ್ಮ ರ್‍ಯಾಲಿಯ ಉದ್ದೇಶಕ್ಕೆ ಧಕ್ಕೆ ಬಂದೀತು ಎಂದು ಆ ಲೆಸ್ಬಿಯನ್ ಸಂಘಟನೆ ತಮ್ಮೊಂದಿಗೆ ರ್‍ಯಾಲಿಯಲ್ಲಿ ಪಾಲ್ಗೊಳ್ಳುವುದನ್ನು ಒಪ್ಪಿರಲಿಲ್ಲ. ಮುಂಬಯಿಯಲ್ಲಿರುವ "ಸ್ತ್ರೀ ಸಂಗಂ" ಸಂಸ್ಥೆ ತನ್ನ ಹೆಸರನ್ನು 2000ದ ಇಸವಿಯಲ್ಲಿ Lesbian and Bisexual women in Action (LABIA) ಎಂಬುದಾಗಿ ಬದಲಾಯಿಸಿಕೊಂಡಾಗ ಮಹಿಳಾ ಚಳವಳಿಗಳ ಒಳಗೇ ಸ್ತ್ರೀವಾದಿಗಳು ಆ ಹೆಸರಿನ ಅಬ್ಬರದ ಬಗ್ಗೆ ಮುಜುಗರಿಸಿದ್ದರು.

ಹೀಗೆ ಎಡೆಬಿಡದೆ ಸ್ವ-ಸಮರ್ಥನೆ/ಆತ್ಮ ರಕ್ಷಣೆಯ ಜಾಗಕ್ಕೆ ತಳ್ಳಲ್ಪಡುತ್ತಿದ್ದುದು ಈ ವಿಲಕ್ಷಣ ಗುಂಪುಗಳು ಸಮಾನ ಲೈಂಗಿಕ ಹಿಂಸಾಚಾರದ ಪ್ರಶ್ನೆಗಳನ್ನು ಏಕೆ ಪ್ರತಿಪಾದಿಸತೊಡಗಿದವು ಎಂಬುದಕ್ಕೆ ವಿವರಣೆ ನೀಡಬಲ್ಲದು. 2001ರ ಆರಂಭದಲ್ಲಿ ಲೈಂಗಿಕ ಆಕ್ರಮಣಗಳನ್ನು ಕುರಿತಂತೆ ಮಾಡಿದಂಥ 172ನೆಯ ಲಾ ಕಮಿಷನ್ ರೆಕಮೆಂಡೇಶನ್‌ಗಳಲ್ಲಿ ಸಮಾನಲಿಂಗಿಗಳಾದವರ ನಡುವೆಯೂ (Gay) ಲೈಂಗಿಕ ದುರಾಕ್ರಮಣ ಸಂಭವಿಸುವುದನ್ನು ಲೈಂಗಿಕ ಹಿಂಸಾಚಾರದ ಪರಿಧಿಯಲ್ಲಿ ಸೇರಿಸದೆ ಬಿಡಲಾಗಿದೆಯೆಂದು ವಿಲಕ್ಷಣ ಗುಂಪುಗಳು, ಮಕ್ಕಳ ಹಕ್ಕು ಗುಂಪುಗಳೂ ಒಂದು ಸಭೆಯಲ್ಲಿ ಬಲವಾಗಿ ಆಕ್ರೋಶ ವ್ಯಕ್ತಪಡಿಸಿದ್ದವು. ತಾರತಮ್ಯ ವಿರೋಧಿ ಕಾನೂನುಗಳ ಅಭಾವದಿಂದಾಗಿ ಸಲಿಂಗಕಾಮಿ ಜನರ ಹಕ್ಕುಗಳು ಬಾಧಿತವಾಗಬಹುದು, ಅದರಲ್ಲೂ ಕಾನೂನಿನ ದುರುಪಯೋಗದ ಸನ್ನಿವೇಶಗಳಲ್ಲಿ ಇಂಥ ಸಾಧ್ಯತೆ ಇದೆ ಎಂಬುದಾಗಿ ಮಹಿಳಾ ಗುಂಪುಗಳ ಆ ಸಭೆಯಲ್ಲಿ ಭಾವಿಸಲಾಯಿತು. ನಮ್ಮ ಸಾಮಾಜಿಕ ರಾಜಕೀಯ ಸಂದರ್ಭದಲ್ಲಿ ಸಲಿಂಗಕಾಮಿ ಜನಗಳು ಲೈಂಗಿಕ ದುರಾಕ್ರಮಣದ ಸುಳ್ಳು ಆರೋಪಗಳನ್ನು ಎದುರಿಸಬಹುದಾದ ಸಾಧ್ಯತೆ ಹೆಚ್ಚು. ಇದರೊಂದಿಗೆ ಕಾನೂನಿನ ಸಂದರ್ಭಕ್ಕೆ ಸಲಿಂಗಕಾಮಿ ಜನಗಳನ್ನು ಬರಮಾಡಿಕೊಳ್ಳುವ ಬಿಂದುವು ಕೇವಲ ಹಿಂಸಾಚಾರದ ಪ್ರಶ್ನೆಯನ್ನು ಸಂಬೋಧಿಸುವ ಮೂಲಕ ಆಗಬಾರದು ಎಂಬುದು ನಮ್ಮ ಅನಿಸಿಕೆಯಾಗಿತ್ತು.

ಮಹಿಳಾ ಚಳವಳಿಗಳು ಹಿಂಸಾಚಾರದ ಪ್ರಶ್ನೆಗಳೊಂದಿಗೆ ತೊಡಗಿಕೊಳ್ಳುವುದನ್ನು ಮುಂದುವರೆಸಿದ್ದವೆಂಬುದಕ್ಕೆ ಕೌಟುಂಬಿಕ ಹಿಂಸಾಚಾರವನ್ನು ಸಂಬೋಧಿಸಬಲ್ಲ ವ್ಯಾಪಕ ಕಾನೂನಿನ ಪರವಾಗಿ ಅವು ಪ್ರಚಾರಾಂದೋಲನ ಕೈಗೊಂಡಿದ್ದುದೇ ಸಾಕ್ಷಿ. ಕಳೆದ ನಾಲ್ಕೈದು ವರ್ಷಗಳಲ್ಲಿ ಈ ಹೋರಾಟ ತೀವ್ರವಾಗುತ್ತಿದೆ. ಈ ಪ್ರಚಾರ, ಆಂದೋಲನಗಳ ಫಲವಾಗಿಯೇ PWDVA (Protection of women from Domestic Vio-

lence Act) ಎಂಬ ಕಾಯಿದೆ ಪಾರ್ಲಿಮೆಂಟಿನಲ್ಲಿ ಜಾರಿಗೆ ಬಂದಿತು. ಈ ಕಾಯಿದೆಗೆ ಸಿವಿಲ್ ಮತ್ತು ಕ್ರಿಮಿನಲ್ ವಿಧಾನಗಳೆರಡನ್ನೂ ಒಳಗೊಂಡ ಸಂಯುಕ್ತನ್ಯಾಯ ವಿಧಾನವನ್ನು ಹೊಂದಿರುವುದು ನಿಜವಾಗಿ ಸಹಾಯಕವೆ ಎಂಬ ಬಗ್ಗೆ ವೃತ್ತಿನಿರತ ವಕೀಲರು ಇನ್ನೂ ವಾಗ್ವಾದದಲ್ಲಿ ತೊಡಗಿದ್ದಾರೆ. ಅಷ್ಟೆ ಅಲ್ಲದೆ PWDVA ಸುತ್ತಲೂ ಕುತೂಹಲಕಾರಿಯಾದ, ಆದರೆ ಅಷ್ಟು ಹೊಸತೇನೂ ಅಲ್ಲದ ವಾದವು – ಕೇವಲ ಕಾನೂನಿನ ಸುಧಾರಣೆ ಪರಿಣಾಮಕಾರಿಯಾದೀತೆ? ಎಂಬುದರ ಚರ್ಚೆಯೂ ಮುಂದುವರೆಯುತ್ತಿದೆ. ಕಾನೂನನ್ನು ಸಮರ್ಪಕವಾಗಿ ಜಾರಿಗೊಳಿಸುವುದರಲ್ಲಿ ನ್ಯಾಯಾಧೀಶರ ಸೂಕ್ಷ್ಮಜ್ಞತೆ, ಮಹಿಳಾ ಪ್ರಶ್ನೆಗಳನ್ನು ನಿರ್ವಹಿಸುವಾಗ ಮ್ಯಾಜಿಸ್ಟ್ರೇಟರುಗಳ ಸಾಮರ್ಥ್ಯವನ್ನು ಕುರಿತಂತೆ ಮಾಮೂಲಾಗಿ ಏಳುವ ಪ್ರಶ್ನೆಗಳೂ ಹಾಗೆಯೇ ಉಳಿದಿವೆ.

PWDVAದ ಒಂದು ಮುಖ್ಯವಾದ ಅಂಶವೆಂದರೆ ಮಹಿಳೆಯರ ವಸತಿಯ ಹಕ್ಕುಗಳನ್ನು ಅದು ಬಲಪಡಿಸುವುದಲ್ಲದೆ ಕಾನೂನಿನಲ್ಲೇ ಮೊಟ್ಟಮೊದಲ ಬಾರಿಗೆ ಕೌಟುಂಬಿಕ ಹಿಂಸಾಚಾರ ಎನ್ನುವುದು ವೈವಾಹಿಕ ಚೌಕಟ್ಟಿಗಷ್ಟೇ ಸೀಮಿತವಲ್ಲ ಎಂಬುದನ್ನು ಅದು ಪರಿಗಣಿಸಿದೆ. ಮಹಿಳೆಯರನ್ನು ಹಿಂಸೆಯಿಂದ ರಕ್ಷಿಸುವ ಕನ್ನಡಕದ ಮೂಲಕವೇ ಅದು ರೂಪುಗೊಂಡಿದೆಯಾದರೂ "ವೈವಾಹಿಕ ರೀತಿಯದಾದ" ಇತರ ಸಂಬಂಧಗಳನ್ನೂ ಅದು ಮಾನ್ಯ ಮಾಡಿದೆ. ಈ ಕಾನೂನು ಹೊಸತಾದ್ದರಿಂದ ವಕೀಲರು, ಮಹಿಳಾ ಕಾರ್ಯಕರ್ತೆಯರು ಅದನ್ನು ಹೇಗೆ ಪರಿಣಾಮಕಾರಿಯಾಗಿ ಬಳಸಬಹುದು ಎಂಬುದನ್ನು ಇನ್ನೂ ಅಭ್ಯಸಿಸುತ್ತಿದ್ದಾರೆ. ನಾವು ಈಗ ಅದನ್ನು ಬೇರೆ ಸನ್ನಿವೇಶಗಳಿಗೆ, ಉದಾಹರಣೆಗೆ ಮಹಿಳೆಯರಿಗೆ ತಮ್ಮ ಪಿತೃಗೃಹದಲ್ಲಿದ್ದಾಗ ಕೂಡ ಎದುರಾಗುವ ಹಿಂಸೆಗಳಿಂದ ರಕ್ಷಣೆ ಪಡೆಯುವುದಕ್ಕೂ ಆ ಕಾನೂನನ್ನು ಹೇಗೆ ಬಳಸಬಹುದೆಂದು ಪರಿಶೀಲಿಸಬೇಕಾಗಿದೆ.

ಕೌಟುಂಬಿಕ ಹಿಂಸಾಚಾರದ ಜೊತೆಗೆ ಮಹಿಳಾ ಚಳವಳಿಯು ಮಹಿಳೆಯರ ಮೇಲಿನ ಹಿಂಸೆಯಲ್ಲಿ ಸುತ್ತಲಿನ ರಾಜಕೀಯವನ್ನು ಅರ್ಥಮಾಡಿಕೊಳ್ಳುವ ಯತ್ನವನ್ನು ತೀಕ್ಷ್ಣಗೊಳಿಸಬೇಕಾದ ಒತ್ತಾಯಕ್ಕೆ ಒಳಗಾಗಿದೆ. 2002ರಲ್ಲಿ ಗುಜರಾತಿನಲ್ಲಿ ಮುಸ್ಲಿಮರನ್ನೇ ಗುರಿಯಾಗಿಟ್ಟುಕೊಂಡು ನಡೆಸಿದ ಹಿಂಸಾಚಾರದಲ್ಲಿ ಆ ಸಮುದಾಯದ ಮಹಿಳೆಯರ ಮೇಲಿನ ಲೈಂಗಿಕ ಹಿಂಸಾಚಾರವು ಎಷ್ಟು ಬೃಹತ್ ಪ್ರಮಾಣದ್ದಾಗಿತ್ತೆಂದರೆ ಮುಖ್ಯವಾಹಿನಿ ಸಮೂಹ ಮಾಧ್ಯಮಗಳು ಕೂಡ ಸಾಮೂಹಿಕ ಅತ್ಯಾಚಾರ, ಗುಂಪು ಅತ್ಯಾಚಾರಗಳನ್ನು ಗುರುತಿಸಲೇ ಬೇಕಾದಂಥ ಅನಿವಾರ್ಯಸ್ಥಿತಿ ಇತ್ತು. ಮಹಿಳೆಯರ ದೇಹಗಳು ಸದಾ ಒಂದು ಯುದ್ಧ ನಿವೇಶನ ಆಗಿದ್ದು 2002ರ ಗುಜರಾತಿನ ಘಟನೆ ಆ ಸಂಗತಿಯನ್ನು ದೊಡ್ಡ ರೀತಿ ಬಯಲಿಗೆ ತಂದಿತು.



ಆ ಹಿಂಸಾಚಾರಕ್ಕೆ ಮಹಿಳಾ ಚಳವಳಿಗಳ ಪ್ರತಿಸ್ಪಂದನೆ ಕೂಡಲೇ ಆರಂಭವಾಯಿತು. ದೇಶದ ಎಲ್ಲ ಕಡೆಗಳಿಂದ ಸ್ವಾಯತ್ತ ಮಹಿಳಾ ಗುಂಪುಗಳ ಮಹಿಳೆಯರು 2002ರ ಮಾರ್ಚ್ 10ರಂದು ಗುಜರಾತಿನಲ್ಲಿ ನಡೆಯುತ್ತಿದ್ದ ಪರಿಹಾರ ಕಾರ್ಯಗಳಲ್ಲಿ ಪಾಲ್ಗೊಂಡರು. ಮಹಿಳೆಯರು ಅನುಭವಿಸಿದ ಬೃಹತ್ ಪ್ರಮಾಣದ ಲೈಂಗಿಕ ಹಿಂಸಾಚಾರಗಳ ಮೊದಲ ವರದಿಯೊಂದನ್ನು ಮಹಿಳಾ ಗುಂಪುಗಳು ಸಿದ್ಧಪಡಿಸಿದ್ದು, ಅದಕ್ಕೆ 'Survivors Speak' ಎಂಬ ಶೀರ್ಷಿಕೆ ನೀಡಿ ಪ್ರಕಟಿಸಿದವು. ಒಂದು ವರ್ಷದ ಬಳಿಕ ಅಂತರರಾಷ್ಟ್ರೀಯ ಸ್ತ್ರೀವಾದಿಗಳು, ವಕೀಲರು ಮತ್ತು ಬುದ್ಧಿಜೀವಿಗಳನ್ನು ಒಳಗೊಂಡಿದ್ದ ಒಂದು ಪ್ರತ್ಯೇಕ ತನಿಖಾ ಸಮಿತಿಯನ್ನು ಸಂಘಟಿಸಲಾಯಿತು. Inter national Initiative for Justice in Gujarat ಎಂಬ ಈ ಸಮಿತಿಯು ವ್ಯಾಪಕ ಹಿಂಸಾಚಾರಗಳು ನಡೆದಿದ್ದಂಥ ಪ್ರದೇಶಗಳೆಲ್ಲದರಲ್ಲೂ ಪ್ರವಾಸ ನಡೆಸಿ ಒಂದು ವರದಿಯನ್ನು ಸಿದ್ಧಪಡಿಸಿ "Threatened Existence" ಎಂಬ ಹೆಸರಿನಿಂದ ಅದನ್ನು ಬಿಡುಗಡೆ ಮಾಡಿತು. ಸಾಮೂಹಿಕ ಸಂಘರ್ಷದ ಸನ್ನಿವೇಶಗಳಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಹಿಂಸಾಚಾರವನ್ನು ಕುರಿತ ಮಹತ್ವದ ವಿಶ್ಲೇಷಣೆಯೊಂದು ಈ ವರದಿಯಿಂದ ಹೊಮ್ಮಿ ಬಂದಿತು.

2002ರಲ್ಲಿ ಗುಜರಾತಿನ ಘಟನೆಯು ನಮ್ಮ ಮಹಿಳೆಯರು ತಮ್ಮ ತಮ್ಮ ಧಾರ್ಮಿಕ ಗುಂಪುಗಳೊಂದಿಗೇ ತಮ್ಮನ್ನು ಗುರುತಿಸಿಕೊಂಡಿರುವುದನ್ನು ಮಹಿಳೆಯರು ಎಂಬುದಕ್ಕಿಂತ ಧಾರ್ಮಿಕ ಅಸ್ಮಿತೆಗಳೊಂದಿಗೇ ತಮ್ಮ ಅಸ್ಮಿತೆಯನ್ನೂ ಗುರುತಿಸಿಕೊಳ್ಳುತ್ತಾರೆ ಎಂಬ ಸಂಗತಿಯನ್ನು ಬಲಪಡಿಸಿದೆ. ಲೂಟಿ, ಹಿಂಸಾಚಾರ, ದೌರ್ಜನ್ಯಗಳಲ್ಲಿ ಹಿಂದೆಂದೂ ಇರದಿದ್ದಷ್ಟು ಆಕಸ್ಮಿಕ ರೀತಿಯಲ್ಲಿ ಮಹಿಳೆಯರೂ ಭಾಗವಹಿಸಿದರು ಎನ್ನುವುದು ಮಹಿಳೆಯರನ್ನು ಅವರ ವಿವಿಧ ಅಸ್ಮಿತೆಗಳೊಂದಿಗೆ ಅರ್ಥಮಾಡಿಕೊಳ್ಳುವಲ್ಲಿ ನಮ್ಮ ವೈಫಲ್ಯವನ್ನೇ ಬಯಲು ಮಾಡಿದೆ. ಕೋಮುವಾದಿಗಳಾದ ಮಹಿಳೆಯರು ಹಿಂಸಾಚಾರಗಳಲ್ಲಿ ಭಾಗವಹಿಸುವುದನ್ನು ನಿರ್ವಹಿಸುವ ವಿಷಯವಾದ ನಮ್ಮ ಅಸಾಮರ್ಥ್ಯವನ್ನು ಅದು ತೋರಿಸಿದೆ.

1992–93ರಲ್ಲಿ ಹಾಗೂ 2002ರಲ್ಲಿ ಮತ್ತು ಅನಂತರವೂ ಮುಸ್ಲಿಂ ಸಮುದಾಯವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ನಡೆಸುತ್ತ ಬರಲಾಗುತ್ತಿರುವ ಹಿಂಸಾಚರಣೆಗಳು ಮುಸ್ಲಿಂ ಮಹಿಳೆಯರಿಗೆ ಅವರ ಸಮುದಾಯದಲ್ಲಿ ಇರುವಂತಹ ಹಕ್ಕುಗಳ ಉಲ್ಲಂಘನೆಗೂ ಹಾದಿಮಾಡಿಕೊಟ್ಟಿವೆ. ಸಮುದಾಯ ರಕ್ಷಣೆ ಎಂದರೆ ಮಹಿಳೆಯರ ಸ್ವಾತಂತ್ರ್ಯವನ್ನು ಮೊಟಕು ಗೊಳಿಸುವುದೆಂದೇ ಅರ್ಥೈಸಲ್ಪಟ್ಟದ್ದು ಪರಿಹಾರ ಕ್ಯಾಂಪುಗಳಲ್ಲಿ ಮಹಿಳೆಯರನ್ನು ಎಷ್ಟೆಲ್ಲ ಹಿಂಸೆಗಳಿಗೆ ಬಲಿಯಾಗಿಸಲಾಯಿತು. ಎಂಬುದನ್ನಂತೂ ಹೇಳುವಂತೆಯೇ ಇಲ್ಲ.

ಮಹಿಳಾ ಚಳವಳಿಗಳು ಮಹಿಳೆಯರ ಧಾರ್ಮಿಕ ಹಕ್ಕುಗಳನ್ನು ನಿರ್ಲಕ್ಷಿಸಿವೆ ಎಂದಲ್ಲ. ಅಲ್ಪಸಂಖ್ಯಾತ ಮಹಿಳೆಯರು, ಅದರಲ್ಲೂ ಮುಸ್ಲಿಂ ಮಹಿಳೆಯರು ಎದುರಿಸುವ ವಿಶಿಷ್ಟ ರೀತಿಯ ದಮನ, ಮಹಿಳಾ ಚಳವಳಿಯಲ್ಲಿ ಯಾವತ್ತೂ ಬಹು ಮುಖ್ಯ ಕಾಳಜಿಗಳಲ್ಲಿ ಒಂದಾಗಿದೆ; ಸರ್ಕಾರದೊಂದಿಗೆ ಸಂಘರ್ಷಕ್ಕಿಳಿವ ಬಿಂದುವೂ ಆಗಿದೆ. ಚಳವಳಿಯು ಹೊಸದಾಗಿ ಎದುರಿಸುತ್ತಿರುವ ಹಾಗೂ ಪ್ರತಿಸ್ಪಂದಿಸಲು ಕಲಿಯುತ್ತಿರುವ ಇನ್ನೊಂದು ಸಂಗತಿ ಎಂದರೆ ಜಾಟ್ ಪಂಚಾಯತ್‌ಗಳು, ಮುಸ್ಲಿಂ

ಮೌಲ್ವಿಗಳು ಫತ್ವಾ ಚಲಾಯಿಸುವ ಸಮಾನಾಂತರ ಕಾನೂನು ವ್ಯವಸ್ಥೆಯನ್ನು ಕುರಿತದ್ದು. ಈ ಫತ್ವಾಗಳು ಸ್ಪಷ್ಟವಾಗಿ ಮಹಿಳೆಯರನ್ನು ಒಳಗೇ ಬಂಧಿಸಿಡುವ ಉದ್ದೇಶದವು.

1980ರ ದಶಕದ ಮಧ್ಯಭಾಗದಿಂದ ಮಹಿಳಾ ಚಳವಳಿಗಳು ಮುಂದಿಡುತ್ತಿರುವ ಒಂದು ಪ್ರಮುಖ ಹಕ್ಕೊತ್ತಾಯವು ಲಿಂಗತ್ವನ್ಯಾಯವುಳ್ಳ ವೈಯಕ್ತಿಕ ಕಾನೂನಿಗೆ ಸಂಬಂಧಿಸಿದ್ದು. ಲಿಂಗತ್ವ ನ್ಯಾಯಕ್ಕೆ ಬದ್ಧವಾದ ವೈಯಕ್ತಿಕ ಕಾನೂನು ಮತ್ತು ಸಮಾನನಾಗರಿಕ ಕಾನೂನುಗಳ ಪ್ರಶ್ನೆಗಳು ಪೂರ್ತಿಯಾಗಿ ಬೇರೆಯದೇ ಆಗಿದ್ದರೂ. ಬಿಜೆಪಿಯಂಥ ಬಲಪಂಥೀಯ ರಾಜಕೀಯ ಪಕ್ಷಗಳೂ ಸಮಾನ ನಾಗರಿಕ ಕಾನೂನಿಗಾಗಿ ತಮ್ಮ ವಾಗ್ಝರಿಯನ್ನು ಹರಿಸತೊಡಗಿದ ಮೇಲೆ ನಾವು ಆ ನಿಟ್ಟಿನ ಹಕ್ಕೊತ್ತಾಯವನ್ನು ಕೈ ಬಿಟ್ಟಿದ್ದೇವೆ.

ಮುಸ್ಲಿಂ ಮಹಿಳೆಯರ ಹಕ್ಕುಗಳನ್ನು ಧಾರ್ಮಿಕ ಚೌಕಟ್ಟಿನೊಳಗೇ ಪರಿಗಣಿಸಬೇಕೋ ಅಥವಾ ಶರಿಯತ್‌ನ ಒಳಗೆ ಸುಧಾರಣೆಗಾಗಿ ನಡೆಯುತ್ತಿರುವ ಹಕ್ಕೊತ್ತಾಯಗಳನ್ನು ವಿಶಾಲಾರ್ಥದ 'ಮಾನವ ಹಕ್ಕುಗಳು' ಎಂಬ ದೃಷ್ಟಿಕೋನದಿಂದ ನೋಡಬೇಕೋ ಎಂಬ ಚರ್ಚೆ ಈಗ ಹಳೆಯದಾಗಿ ಹೋಗಿದೆ, ಹೆಚ್ಚು ಕಡಿಮೆ ಕಾವನ್ನು ಕಳೆದುಕೊಂಡಿದೆ. ಮಹಿಳೆಯರ ನಡುವೆಯೇ ಕೆಲಸಮಾಡುವ, ಮುಂಬಯಿನ Awaaze-e-Niswan ನಂಥ ಗುಂಪುಗಳಲ್ಲದೆ ಮುಸ್ಲಿಂ ಮಹಿಳೆಯರ ಹಕ್ಕುಗಳಿಗಾಗಿ ವಿಶೇಷವಾಗಿ ಕೆಲಸಮಾಡುತ್ತಿರುವ ಹಲವು ಗುಂಪುಗಳು 2002ರ ಘಟನೆಯ ಫಲವಾಗಿ ಹುಟ್ಟಿಕೊಂಡಿವೆ. ಅವು ಮುಸ್ಲಿಂ ಮಹಿಳಾ ಹಕ್ಕುಗಳ ನೆಟ್‌ವರ್ಕ್‌ನ ಒಂದು ಭಾಗವಾಗಿವೆ. ಲಿಂಗತ್ವನ್ಯಾಯವುಳ್ಳ ಕಾನೂನುಗಳ/ಸಮಾನ ನಾಗರಿಕ ಸಂಹಿತೆಗಳ ಬಗ್ಗೆ ಹಾಗೂ ಮುಸ್ಲಿಂ ಮಹಿಳಾ ಹಕ್ಕುಗಳ ಬಗ್ಗೆ ಶರಿಯತ್ ಒಳಗಾಗಲಿ, ಧರ್ಮನಿರಪೇಕ್ಷ ಮಾನವ ಹಕ್ಕುಗಳ ಚೌಕಟ್ಟುಗಳ ಒಳಗಾಗಲಿ ಯಾವುದೇ ಚರ್ಚೆ ಆಗುತ್ತಿಲ್ಲ ಎಂಬುದು ಈ ಹೊಸ ಗುಂಪುಗಳಲ್ಲಿ ಸಂಘಟಿತರಾಗಿರುವ ದೊಡ್ಡಸಂಖ್ಯೆಯ ಮಹಿಳೆಯರು ಇಂಥ ಚರ್ಚೆಗಳಿಗೆ ತೆರೆದುಕೊಂಡೇ ಇಲ್ಲ ಎನ್ನುವುದನ್ನು ಸೂಚಿಸುತ್ತದೆ.

ಮಹಿಳಾ ಚಳವಳಿಯನ್ನು ಕಳೆದ 10 ವರ್ಷಗಳಲ್ಲಿ ತನ್ನ ಹಿಡಿತದಲ್ಲಿ ಇರಿಸಿಕೊಂಡಿರುವ ಮತ್ತೊಂದು ಬೆಳವಣಿಗೆ ಮಹಿಳಾ ಚಳವಳಿಗಳ ಒಳಗಡೆಯೇ ಮಹಿಳಾ ಗುಂಪುಗಳ ಸ್ವರೂಪದಲ್ಲೇ ಆಗಿರುವ ಪರಿವರ್ತನೆಯದು. 1980ರ ಆರಂಭ ಕಾಲಕ್ಕೆ ಅನೇಕ ಸ್ವಾಯತ್ತ ಮಹಿಳಾಗುಂಪುಗಳು ಅಸ್ತಿತ್ವಕ್ಕೆ ಬಂದವು. ಅವು ಬಹುಮಟ್ಟಿಗೆ ಸ್ವಯಂ ಸಂಘಟಿತ ಗುಂಪುಗಳು. ಅವುಗಳ ಸದಸ್ಯೆಯರು ಬಹುತೇಕ ಪೂರ್ಣಕಾಲದ ಉದ್ಯೋಗಹೊಂದಿದ್ದು ಚಳವಳಿಯ ಕಾರ್ಯಗಳಲ್ಲೂ ತೊಡಗಿಕೊಂಡಿದ್ದವರಾಗಿರುತ್ತಿದ್ದರು. ಕಳೆದ ಹತ್ತು ವರ್ಷಗಳಲ್ಲಿ ಅಂಥ ಅನೇಕ ಗುಂಪುಗಳು NGOಗಳಾಗಿ ರೂಪಾಂತರಗೊಂಡಿವೆ, ಅಥವಾ ಮಹಿಳಾ ವಿಷಯಗಳ ನಿರ್ವಹಣೆಗಾಗಿ ಸ್ಥಾಪಿತವಾದ ಹೊಸ NGOಗಳೂ ಕಾಣಿಸಿಕೊಂಡಿವೆ. ಸರ್ಕಾರೇತರ ಸಂಘಟನೆಗಳಾಗಿ ಮಹಿಳಾ ಗುಂಪುಗಳು ಬದಲಾಗ ತೊಡಗಿರುವುದರಿಂದ – ಮುಂಚಿನಿಂದ ಇದ್ದ – ಗುಂಪುಗಳ ಮತ್ತು ಹೊಸ ಸಂಘಟನೆಗಳ ಒಳಗೆ ಶ್ರೇಣೀಕರಣ ಉಂಟಾಗಿದೆ. ಸಾಮೂಹಿಕ ಕಾರ್ಯಾಚರಣೆಯ ಪ್ರಕ್ರಿಯೆ ಮತ್ತು ಪ್ರಾಮುಖ್ಯಗಳು ಹಿಂದಕ್ಕೆ ತಳ್ಳಲ್ಪಟ್ಟಿವೆ. ಬೇರೆ ಚಳವಳಿಗಳಿಗಿಂತ ಮಹಿಳಾ ಗುಂಪುಗಳನ್ನು ವಿಭಿನ್ನವಾಗುವಂತೆ ಮಾಡಿದ್ದ ಅಂಶ ಎಂದರೆ ಇವುಗಳಲ್ಲಿ ಔಪಚಾರಿಕ ನಾಯಕತ್ವ ಇರುವುದಿಲ್ಲ ಎಂಬುದೇ ಆಗಿತ್ತು. ಈಗ ಅದು ಕಾಣೆಯಾಗಿದೆ. ಜೊತೆಗೆ NGOಗಳನ್ನಾಗಿಸುವ ಯತ್ನಕ್ಕೆ ಹೊಂದಿಕೊಂಡಂತೆ ಧನಸಹಾಯ (Funding) ರಾಜಕೀಯ ಬಂದಿದೆ. ಇದರಿಂದಾಗಿ ಒಂದೊಂದು ಮಹಿಳಾ ಸಮಸ್ಯೆಗೆ ಎಷ್ಟು ಹಣದ ಮೊತ್ತ ಸಿಗಬಲ್ಲದು ಎಂಬುದನ್ನು ಅವಲಂಬಿಸಿ ಕಾರ್ಯಕ್ರಮಗಳೂ ಚಟುವಟಿಕೆಗಳೂ ನಿರ್ಧರಿತವಾಗುತ್ತವೆ. ಹೆಣ್ಣುಗಳ ವೇಶ್ಯಾವಾಟಿಕೆ ಸಾಗಾಣಿಕೆಯ ಸಮಸ್ಯೆಯ ಬಗ್ಗೆ ಅಥವಾ 'ಮಹಿಳೆಯರಿಗಾಗಿ ಸಾಮುದಾಯಿಕ ಕಾರ್ಯಕ್ರಮ'ಗಳನ್ನು ಕುರಿತಂತೆ ಏಕೆ ದೊಡ್ಡ ಸಂಖ್ಯೆಯಲ್ಲಿ ಮಹಿಳಾ ಗುಂಪುಗಳು ಕೆಲಸ ಮಾಡುತ್ತಿವೆ ಎಂಬುದಕ್ಕೆ, ಮಹಿಳೆಯರ ದಿನನಿತ್ಯದ ಸಂಕಷ್ಟಗಳಿಗೆ ಸ್ಪಂದಿಸುತ್ತಾ ಪ್ರತಿಭಟಿಸುವವರ ಗುಂಪುಗಳು ಏಕೆ ಕಡಿಮೆಯಾಗಿವೆ ಎಂಬುದಕ್ಕೆ ಕಾರಣ ಈ ಫಂಡಿಂಗ್ ರಾಜಕೀಯದಲ್ಲಿದೆ. ಇದರ ಪರಿಣಾಮವೆಂದರೆ ಸ್ವಯಂ ಸಂಘಟಿತ, ಯಾವ ಧನಸಹಾಯಕ್ಕೂ ಅವಲಂಬಿತವಾಗಿರದ ಸ್ವಾಯತ್ತ ಮಹಿಳಾ ಗುಂಪುಗಳು ಈಗ ಹೆಚ್ಚಾಗಿ ಅಂತರ್ಮುಖಿಗಳಾಗಿವೆ. ನಮ್ಮ ನಮ್ಮ ವರ್ಗ, ಜಾತಿಗಳ ನೆಲೆಗೆ ಹೊರತಾದ ಮಹಿಳೆಯರೊಂದಿಗೆ ಹೇಗೂ ತೊಡಗಿಕೊಳ್ಳಲಾರದಂತೆ ಆಗಿವೆ. ಮುಂಬಯಿಯಲ್ಲಿ ನಗರದ ಮಹಿಳೆಯರ ಮೇಲಿನ ಲೈಂಗಿಕ ದುರಾಚಾರಗಳು ಬಲವಾಗಿ ನಮ್ಮ ಮೇಲೆ ಪರಿಣಾಮಬೀರುವ ಹಾಗೆ ಹಳ್ಳಿಯ ದಲಿತ ಮಹಿಳೆಯರ ಅತ್ಯಾಚಾರದ



ಸಮಸ್ಯೆ ಪರಿಣಾಮ ಬೀರುವುದಿಲ್ಲ. ಹೀಗೆ ಸಮಸ್ಯೆಗಳಲ್ಲಿ ತೊಡಗಿಕೊಳ್ಳದಿರುವುದರ ಫಲವಾಗಿ ನಮ್ಮ ಪ್ರಚಾರಾಂದೋಲನದ ಸ್ವರೂಪ ಕೂಡ ಬದಲಾಗಿದೆ. ನಾವೀಗ ಬೀದಿ ಮೆರವಣಿಗೆಗಳಲ್ಲಿ ತೊಡಗಲಾರೆವು, ಜನರ ಬಳಿಹೋಗಲು ಯತ್ನಿಸಲಾರೆವು. ಇಲ್ಲವೆ ಸಕ್ರಿಯವಾಗಿ ನಮ್ಮ ನಮ್ಮ ಅರಿವನ್ನ ಮಹಿಳಾ ಸಮುದಾಯ ಸಂಘಟನೆಗಳ ಜೊತೆ ಹಂಚಿಕೊಳ್ಳುವುದು ನಮಗೆ ಸಾಧ್ಯವಾಗುತ್ತಿಲ್ಲ. ಉದಾಹರಣೆಗೆ, ಮಹಿಳೆಯರು ಈಗ ಸಂಘಟಿತರಾಗುವುದೇ ಆದರೆ ಅದು ಸಮುದಾಯ, ಬಸ್ತಿ ಅಥವಾ ಕಾರ್ಮಿಕರನ್ನು ಮಾತ್ರ ಒಳಗೊಳ್ಳುತ್ತಿರುತ್ತದೆ, ಇಲ್ಲವೆ ಸ್ವಸಹಾಯ ಗುಂಪುಗಳಾಗಿರುತ್ತವೆ. ಸಂಘಟನೆಯ ಮೊದಲ ಮೆಟ್ಟಿಲೆಂದೇ ಇದನ್ನು ಯಾವಾಗಲೂ ಕಾಣಲಾಗುತ್ತದೆ. ಮಹಿಳಾ ಚಳವಳಿಗಳ ಒಳಗೇ ಸ್ವಸಹಾಯ ಗುಂಪುಗಳ (SGH) ಮತ್ತು ಸಣ್ಣ ಸಾಲ ಯೋಜನೆಗಳ (Micro Credit)ಗುಂಪುಗಳ ಬಗ್ಗೆ ಕಟುವಾದ ವಿಮರ್ಶೆ ನಡೆದಿದೆಯಾದರೂ ಇದರಿಂದ ಸಂಘಟನಾ ಪ್ರಕ್ರಿಯೆಗೆ ಯಾವ ಹೊಸ ತಿಳಿವನ್ನೂ ಒದಗಿಸಿದಂತಾಗುವುದಿಲ್ಲ. ಬದಲಾಗಿ ಲೈಂಗಿಕತೆ ಅಥವಾ ನೈತಿಕ ಬಣ್ಣವಿರುವಂಥ ಪ್ರಶ್ನೆಗಳ ವಿಷಯದಲ್ಲಿ ಮಾತ್ರ ನಾವು ತೀವ್ರಗಾಮಿ ನಿಲುವನ್ನು ತೆಗೆದುಕೊಳ್ಳಬಲ್ಲೆವು. ಏಕೆಂದರೆ 'ಸಮಾನ ತಳಪಾಯ' ಎಂಬುದೇ ನಮಗೀಗ ಇಲ್ಲವಾಗಿದೆ.

ಮುಂಬರುವ ವರ್ಷಗಳಲ್ಲಿ ನಮ್ಮ ಸ್ವಾಯತ್ತತೆಯನ್ನು ಕಾಪಾಡಿಕೊಳ್ಳುವುದು, ವೈಚಾರಿಕ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳುವುದು ಮತ್ತು ಎಲ್ಲಾ ಮಹಿಳೆಯರೊಂದಿಗೂ ತೊಡಗಿಸಿಕೊಳ್ಳುವುದೇ ನಮ್ಮೆದುರಲ್ಲಿ ಇರುವ ದೊಡ್ಡ ಸವಾಲಾಗಿದೆ.

*ಅನು: ಸುಮಿತ್ರಾ*

# ವಿಷ ವರ್ತುಲದ ಸುಳಿಯಲ್ಲಿ .....

(ಚಿತ್ರ ವಿಮರ್ಶೆ)

ಭಾರತೀದೇವಿ ಪಿ.

'ನಾವೇನೋ ಸಾಕಷ್ಟು ದೂರ ನಡೆದಿದ್ದೇವೆ. ಆದರೆ ಮುಂದುಮುಂದಕ್ಕೆ ನಡೆದದ್ದಲ್ಲ, ಒಂದೇ ವೃತ್ತದಲ್ಲಿ ಮತ್ತೆ ಮತ್ತೆ ಸುತ್ತು ಹಾಕಿದ್ದು' ಎಂದಿದ್ದಳು ಅಕ್ಕ ಒಮ್ಮೆ. ಲಕ್ಷ್ಮಣ ಸೀತೆಗೆ ರಕ್ಷಣೆ ಒದಗಿಸಲೆಂದು ಹಾಕಿದ ಗೆರೆ ದಾಟಿದ್ದಕ್ಕೇ ಅವಳು ರಾವಣನಿಗೆ ಸೆರೆ ಸಿಕ್ಕಿ ಕಷ್ಟ ಪಡಬೇಕಾಯಿತು ಎನ್ನುವ ಕತೆಯನ್ನೂ ನಾವು ಕೇಳಿದ್ದೇವೆ. ಸ್ತ್ರೀಯನ್ನು ಈ ವೃತ್ತದ ಪರಿಧಿಯಲ್ಲೇ ಕಟ್ಟಿಹಾಕುವ, ಅವಳು ಅದನ್ನೇ ಮೆಚ್ಚಿ ನೆಚ್ಚಿಕೊಳ್ಳುವಂತೆ ಮಾಡುವ ಬಗೆ ಒಂದಾದರೆ ಅದನ್ನು ದಾಟಿ ಬರುವ ಹಂಬಲವೆಲ್ಲಾ ನಿರ್ದಯ ವ್ಯವಸ್ಥೆಯೆದುರು ನಿರರ್ಥಕವಾಗುವಾಗ ಹುಟ್ಟುವ ಅಸಹಾಯಕತೆಯ ಮೂಕ ಸಂಕಟ ಇನ್ನೊಂದೆಡೆ. ಪ್ರಸಿದ್ಧ ಇರಾನಿ ನಿರ್ದೇಶಕ ಜಾಫರ್ ಪನಾಹಿಯ ಚಿತ್ರ 'ಸರ್ಕಲ್' ವೃತ್ತದ ತೆಕ್ಕೆಗೆ ಸಿಕ್ಕಿ ಒದ್ದಾಡುವ, ಹೊರಬರುವ ಪ್ರಯತ್ನವೆಲ್ಲಾ ವ್ಯರ್ಥವಾಗಿ ಮತ್ತೆ ಅದೇ ವೃತ್ತದ ಸುಳಿಗೆ ಸಿಲುಕಬೇಕಾದ ಅನಿವಾರ್ಯತೆಗೆ ಒಡ್ಡಿಕೊಳ್ಳುವ ಮಹಿಳೆಯರ ವೇದನೆಯನ್ನು ಯಾವುದೇ ವೈಭವೀಕರಣವಿಲ್ಲದೇ ಸಹಜವಾಗಿ ಅನಾವರಣಗೊಳಿಸುತ್ತದೆ.

ಜಾಫರ್ ಪನಾಹಿ ಸೂಕ್ಷ್ಮ ಸಂವೇದನೆಯ ನಿರ್ದೇಶಕ. ಅಂತಲೇ 'ಸರ್ಕಲ್' ಎಲ್ಲೂ ಯಾವುದನ್ನೂ ಅತಿಗೆಳೆಯದೇ ಅತ್ಯಂತ ಕಲಾತ್ಮಕವಾಗಿ ಮಹಿಳೆಯ ಮೇಲೆ ಆಗುತ್ತಿರುವ ದೌರ್ಜನ್ಯವನ್ನು ಬಯಲಿಗೆಳೆಯುತ್ತದೆ. ಬದುಕಿನಲ್ಲಿ ತುಂಬಾ ನಮ್ಮನ್ನು ನೋಯಿಸುವುದು ದೊಡ್ಡ ದೊಡ್ಡ ಸಂಗತಿಗಳಲ್ಲ, ಒಂದು ಸಣ್ಣ ನಿರ್ಲಕ್ಷ್ಯ, ಸಣ್ಣ ಆಸೆಗಳನ್ನೂ ಈಡೇರಿಸಿಕೊಳ್ಳಲು ಅಡ್ಡಿಯಾಗುವ ಕಟ್ಟುಕಟ್ಟಳೆಗಳು ಮುಂತಾದವು. ಈ ಪುಟ್ಟದೆನಿಸುವ ಸಂಗತಿಗಳ ಮೂಲಕವೇ ಅದರೊಳಗಿನ ತಣ್ಣಗಿನ ಕ್ರೌರ್ಯವನ್ನು ತೋರಿಸುವ ರೀತಿ ಇಲ್ಲಿದೆ.

ಈ ಸಿನೆಮಾದುದ್ದಕ್ಕೂ ಒಂದೇ ಕಥೆ ಇಲ್ಲ. ನಾಲ್ಕು ಬೇರೆ ಬೇರೆ ಮಹಿಳೆಯರ ಸ್ಥಿತಿಯ ಮೂಲಕ ಹಾದು ಬರುವ ಕಥೆಯ ಎಳೆ ಒಂದೇ. ಕತೆ ಆರಂಭವಾಗುವುದು ಆಸ್ಪತ್ರೆಯೊಂದರ ಲೇಬರ್ ವಾರ್ಡ್‌ನಲ್ಲಿ. ಸೊಲ್ಮಾಜಾ ಗೊಲಾಮಿ ಎಂಬಾಕೆಗೆ ಹೆಣ್ಣುಮಗು ಹುಟ್ಟಿರುವ ವಿಚಾರವನ್ನು ನರ್ಸ್ ಹೇಳುತ್ತಾಳೆ. ಆಕೆಯ ತಾಯಿಮನೆಯವರಿಗೆ ಆಕೆಗೆ ಹೆಣ್ಣುಮಗು ಹುಟ್ಟಿದಲ್ಲಿ ಗಂಡ ವಿಚ್ಛೇದನ ನೀಡುವುದು ಖಚಿತ ಎಂದು ಆತಂಕ ಆರಂಭವಾಗುತ್ತದೆ. ಇಲ್ಲಿ ಬಳಸಲಾಗಿರುವ ಲಾಂಗ್ ಶಾಟ್ ಸನ್ನಿವೇಶಕ್ಕೆ ನೈಜತೆಯನ್ನು ಕೊಟ್ಟಿದೆ. ಮಗು ಹುಟ್ಟಿದ ಸುದ್ದಿಯನ್ನು ತಿಳಿಸಲು ಟೆಲಿಫೋನ್ ಬೂತಿಗೆ ಹೋಗುತ್ತಿದ್ದಂತೆ ಮತ್ತೊಂದು ಕತೆ ಬಿಚ್ಚಿಕೊಳ್ಳುತ್ತದೆ. ಅಂದು ತಾನೇ ಜೈಲಿನಿಂದ ಬಿಡುಗಡೆ ಹೊಂದಿರುವ ಮೂವರು ಮಹಿಳೆಯರು ತಮ್ಮ ಗೂಡು ಸೇರುವ ತವಕದಲ್ಲಿದ್ದಾರೆ. ಈ ಪ್ರಯತ್ನದಲ್ಲಿ ಒಬ್ಬಾಕೆ ಪುನಃ ಸೆರೆಯಾದರೆ, ಮತ್ತೊಬ್ಬಾಕೆ ಅರಜೂ ಹೇಗಾದರೂ ಹಣ ಸಂಪಾದಿಸಲು ಅನ್ಯಮಾರ್ಗ ಕ್ಕಿಳಿಯುತ್ತಾಳೆ. ಆ ಹಣವನ್ನು ಇನ್ನೊಬ್ಬಾಕೆ ನರ್ಗಿಸ್‌ಗೆ ಒತ್ತಾಯದಿಂದ ನೀಡಿ, ನೀನು ಹೇಗಾದರೂ ಮನೆ ಸೇರಿಕೋ, ನನಗೆ ಈ ಹಣ ಮುಟ್ಟಲೂ ಭಯವಾಗುತ್ತದೆ ಎನ್ನುತ್ತಾಳೆ. ಬಸ್ ಸ್ಟಾಂಡ್ ತಲುಪಿದ ನರ್ಗಿಸ್‌ಗೆ ಆಕೆಯ ಜೊತೆ ಯಾರೂ ಗಂಡಸು ಇಲ್ಲದಿರುವುದರಿಂದ ಟಿಕೆಟ್ ನೀಡಲು ಅಲ್ಲಿನ ನೌಕರ ನಿರಾಕರಿಸುತ್ತಾನೆ. ಹೇಗೋ ಆಕೆ ಟಿಕೆಟ್ ಪಡೆದರೂ ಬಸ್ ಬಳಿ ತಪಾಸಣೆಗೆ ಬಂದ ಪೊಲೀಸರನ್ನು ನೋಡಿ ಆಕೆ ಹೆದರಿ ಓಡುತ್ತಾಳೆ.



ಅಲ್ಲಿಗೆ ಇನ್ನೊಬ್ಬ ಪರಿ ಎಂಬಾಕೆಯ ಕತೆ ಆರಂಭವಾಗುತ್ತದೆ. ಈಕೆ ತನಗೆ ಬೇಡವಾದ ಬಸಿರನ್ನು ತೆಗೆಸಲು ಜೈಲಿನಿಂದ ತಪ್ಪಿಸಿಕೊಂಡು ಬಂದವಳು. ಅವಳ ಪ್ರಿಯಕರ ಮರಣದಂಡನೆಗೊಳಗಾಗಿದ್ದಾನೆ. ಗಂಡ ಅಥವಾ ತಂದೆಯ ಸಹಿಯಿಲ್ಲದೇ ಆಕೆ ಗರ್ಭಪಾತ ಮಾಡಿಸುವಂತಿಲ್ಲ. ನೆರವು ಬಯಸಿ ಈಕೆ ಗೆಳತಿ ಎಲ್ಹಾಮ್ ಬಳಿ ಬಂದರೆ ಈಕೆ ತನ್ನ ಹಿಂದಿನ ಬದುಕನ್ನು ಮುಚ್ಚಿಟ್ಟು ವೈದ್ಯರೊಬ್ಬರನ್ನು ಮದುವೆಯಾಗಿದ್ದಾಳೆ. ಅವಳಿಗೆ ಪರಿಯಿಂದಾಗಿ ತನ್ನ ಹಿಂದಿನ ಬದುಕಿನ ವಿವರ ಹೊರಬಂದು ಬದುಕು ಮುರಿಯುವುದು ಬೇಕಿಲ್ಲ. ಅಸಹಾಯಕಳಾದ ಪರಿ ಬಿಕ್ಕುತ್ತಾಳೆ. ಅವಳ ಜೊತೆ ಯಾರೂ ಇಲ್ಲದಿರುವುದರಿಂದ ಹೋಟೆಲ್‌ನಲ್ಲಿ ರೂಮ್ ಮಾಡಲೂ ಅವಳಿಗೆ ಸಾಧ್ಯವಿಲ್ಲದಂತಹ ಸ್ಥಿತಿ ಇದೆ.

ಇನ್ನೊಬ್ಬಾಕೆ ಅನಾಥೆ. ತನ್ನ ಮಗು ತನ್ನ ಬಳಿಯೇ ಇದ್ದರೆ ಅದರ ಭವಿಷ್ಯ ಮುರುಟುತ್ತದೆ ಎಂದು ತಿಳಿದು ಗಟ್ಟಿ ಮನಸ್ಸು ಮಾಡಿ ಸಂತೋಷ ಕೂಟ ನಡೆಯುತ್ತಿರುವ ಜಾಗದಲ್ಲಿ ಮಗುವನ್ನು ತೊರೆಯುತ್ತಾಳೆ. ಮಗುವನ್ನು ತೊರೆಯುವಾಗಿನ ಅವಳ ತಾಕಲಾಟ ಹೇಳತೀರದು.



ಕೊನೆಯಲ್ಲಿ ಬರುವವಳು ಯಾರ ಜೊತೆಗೋ ಕಾರಲ್ಲಿ ಡ್ರಾಪ್ ತೆಗೆದುಕೊಂಡು ವೇಶ್ಯೆ ಎನಿಸಿಕೊಳ್ಳುವವಳು. ಅವಳನ್ನು ಜೈಲಿಗೆ ಕಳಿಸಲಾಗುತ್ತದೆ. ಈಕೆ ಉಳಿದವರಿಗಿಂತ ಭಿನ್ನವಾಗಿ ದೃಢವಾಗಿ ಕಾಣುತ್ತಾಳೆ. ಅದಕ್ಕೇ ಆರಂಭದಲ್ಲಿ ಕಾಣುವ ಕ್ಯಾಮರಾ ಚಲನೆ ಕೊನೆಯ ದೃಶ್ಯದಲ್ಲಿ ಕಾಣದೇ ಹಿನ್ನೆಲೆ ಮಾತ್ರ ಚಲಿಸುತ್ತಿರುತ್ತದೆ. ಕೊನೆಯ ದೃಶ್ಯದಲ್ಲಿ ಜೈಲಿನಲ್ಲಿ ದೂರವಾಣಿ ರಿಂಗಣಿಸುತ್ತದೆ. ಸೊಲ್ಮಾಜಾ ಗೊಲಾಮಿ ಎಂಬಾಕೆಗೆ ಕರೆ ಬರುತ್ತದೆ. ಅಲ್ಲಿಗೆ ವೃತ್ತ ಪೂರ್ಣಗೊಳ್ಳುತ್ತದೆ. ಆರಂಭದಲ್ಲಿ ಹೆಣ್ಣು ಹೆತ್ತು ಆತಂಕ ಎದುರಿಸುತ್ತಿರುವ ಸೊಲ್ಮಾಜಾ ಗೊಲಾಮಿಯನ್ನು ಜೈಲಿಗೆ ಎಳೆತಂದಿರುವ ಕಾರಣ ಯಾವುದು ಎಂಬ ಯೋಚನೆಯನ್ನು ನಿರ್ದೇಶಕ ನೋಡುಗರಿಗೆ ಬಿಡುತ್ತಾನೆ. ಕಾರಣ ನಮಗೆಲ್ಲರಿಗೂ ಬಹುತೇಕ ಖಚಿತ.

ಇಡೀ ಸಿನೆಮಾದುದ್ದಕ್ಕೂ 'ಸರ್ಕಲ್' ಮೋಟಿಫ್ ಮತ್ತೆ ಮತ್ತೆ ಕಾಣಸಿಗುತ್ತದೆ. ಸನ್ನಿವೇಶ, ಚಿತ್ರೀಕರಿಸಲು ಬಳಸುವ ಪರಿಸರ ಎಲ್ಲವನ್ನೂ ವೃತ್ತಾಕೃತಿಯಲ್ಲಿರುವಂತೆ ನೋಡಿಕೊಳ್ಳಲಾಗಿದೆ. ಇಲ್ಲಿ ಗಮನಿಸಬೇಕಾದದ್ದು ಬದುಕನ್ನು ಅಸಹನೀಯಗೊಳಿಸುವ ಪುಟ್ಟ ಪುಟ್ಟ ನಿಷೇಧಗಳು. ಚಿತ್ರದ ಪಾತ್ರಗಳು ಏನೂ ಮಾಡಲು ತೋಚದೇ ಒತ್ತಡವನ್ನು ಹೊರಹಾಕಲು ಸಿಗರೇಟ್ ಸೇದಲೆಂದು ಹೊರಟಾಗಲೆಲ್ಲ ಅದನ್ನು ತಡೆಯಲಾಗುತ್ತದೆ. ಹಾಗೆಯೇ ತಲೆಮೇಲೆ ಹೊದ್ದುಕೊಳ್ಳುವ ಶಾಲು ಕೂಡಾ ಇಲ್ಲಿ ಸಂಕೇತವಾಗಿ ಬಳಕೆಯಾಗಿದೆ. ಪೊಲೀಸರಿಂದ ಮರೆಸಿಕೊಳ್ಳಲು ನರ್ಗಿಸ್ ಮತ್ತು ಅರಜೂ ಶಾಲು ಹೊದ್ದುಕೊಳ್ಳುತ್ತಾರೆ. ಪರಿ ಆಸ್ಪತ್ರೆ ಪ್ರವೇಶಿಸಬೇಕಾದರೆ ಶಾಲು ಹೊದ್ದುಕೊಳ್ಳುವುದು ಕಡ್ಡಾಯ. ಬಸ್ ಏರಲಾರದ ನರ್ಗಿಸ್ ಶಾಲಿನಲ್ಲಿ ತನ್ನನ್ನು ಮುಚ್ಚಿಕೊಂಡು ಅರಜೂ ತನ್ನನ್ನು ಬೀಳ್ಕೊಂಡ ಸ್ಥಳಕ್ಕೆ ಬರುತ್ತಾಳೆ. ಮರೆಯಲ್ಲೇ ಬದುಕಬೇಕಾದ ಅನಿವಾರ್ಯತೆಯನ್ನು ಹೀಗೆ ನಿರ್ದೇಶಕ ಚಿತ್ರಿಸಿದ್ದಾನೆ.

| | |
|---|---|
| ಚಿತ್ರ : | **ದ ಸರ್ಕಲ್** |
| | ಇರಾನ್ ದೇಶದ ಚಿತ್ರ |
| ನಿರ್ದೇಶಕ : | ಜಾಫರ್ ಪನಾಹಿ |
| ವರ್ಷ : | 2000 |

ಇಂದಿಗೂ ಸ್ತ್ರೀಯನ್ನು ನೋಡುವ ದೃಷ್ಟಿಕೋನದಲ್ಲಿ ವಿಶೇಷ ಬದಲಾವಣೆಯೇನೂ ಆಗಿಲ್ಲ. ಅದೂ ಇರಾನ್‌ನಂತಹ ಅರಬ್ ದೇಶದಲ್ಲಿ ಅನೇಕ ಚಿತ್ರವಿಚಿತ್ರ ರೀತಿಯಲ್ಲಿ ಮಹಿಳೆಯನ್ನು ಹಿಡಿದಿಡಲಾಗಿದೆ. ಆಕೆ ಗುರುತಿನ ಚೀಟಿ ಇಲ್ಲದೇ ಅಥವಾ ಜೊತೆಗೆ ಗಂಡಸು ಇಲ್ಲದೇ ಪ್ರಯಾಣಿಸುವಂತಿಲ್ಲ, ಹೋಟೆಲ್‌ನಲ್ಲಿ ರೂಮ್ ಮಾಡುವಂತಿಲ್ಲ. ಹೆಣ್ಣುಮಗುವಿನ ಜನನಕ್ಕೆ ಆಕೆ ಹೊಣೆಯಲ್ಲದಿದ್ದರೂ ಬೀದಿ ಸೇರಬೇಕಾಗುತ್ತದೆ. ತನಗಿಷ್ಟವಿಲ್ಲದ ಬಸಿರನ್ನು ತೆಗೆಸಲು ಆಕೆಗೆ ಸ್ವಾತಂತ್ರ್ಯವಿಲ್ಲ. ಮರಳಿ ಬಾಳುವೆ ಮಾಡುವ ಎಲ್ಲ ಅವಕಾಶವನ್ನೂ ನಿರಾಕರಿಸಿ ಮತ್ತೆ ಅವಳ ಮನೆ ಜೈಲೇ ಆಗುವುದು ವಿಪರ್ಯಾಸ.

ಈ 'ಜೈಲು' ಅನ್ನುವುದು ಕೂಡಾ ಒಂದು ಅಪಾರ ಅರ್ಥವ್ಯಾಪ್ತಿಯಿರುವ ಸಂಕೇತ. ಆಕೆಯ ಪಾಲಿಗೆ ಮನೆ ಮತ್ತು ಜೈಲಿಗೆ ಅಂತಹ ವ್ಯತ್ಯಾಸವೇನಿಲ್ಲ. ಈ ಎರಡೂ ಬಗೆಯ ಜೈಲುಗಳಿಂದ ಹೊರಬರುವ ಪ್ರಯತ್ನ ಎಷ್ಟೇ ಮಾಡಿದರೂ ಸಮಾಜ ಮತ್ತೆ ಅವಳನ್ನು ಅದೇ ಜೈಲಿಗೆ ದೂಡುತ್ತದೆ. ಆಕೆ ಎಲ್ಲಿಂದ ಹೊರಟಿದ್ದಾಳೋ ಮತ್ತೆ ಅಲ್ಲಿಗೇ ಬಂದು ಸೇರುವಲ್ಲಿ ಈ ವಿಷ ವರ್ತುಲ ಕೊನೆಗಾಣುತ್ತದೆ. ಸಂವೇದನಾಶೀಲರಾದ ಪ್ರತಿಯೊಬ್ಬರನ್ನೂ ಕಾಡುವ ಚಿತ್ರವಿದು.



*ಮದುವೆ ಒಂದು ವೃತ್ತಿ ಎಂಬ ಭಾವನೆ ಮೊದಲು ಹೋಗಬೇಕು. ಸ್ವಾತಂತ್ರ್ಯ ಎನ್ನುವುದು ಆರ್ಥಿಕ ಸ್ಥಿತಿಗತಿಗಳ ಮೇಲೆ ಅವಲಂಬಿಸಿದೆ. ಮಹಿಳೆ ಆರ್ಥಿಕವಾಗಿ ಸ್ವತಂತ್ರಳಾಗದೆ ಅಥವಾ ಸ್ವಯಂ ಗಳಿಕೆಯಲ್ಲಿ ತೊಡಗದೆ ಇದ್ದರೆ ಗಂಡ ಅಥವಾ ಇನ್ಯಾರದೋ ಮೇಲೆ ಅವಲಂಬಿತಳಾಗಿ ಉಳಿದಿರಬೇಕಾಗುತ್ತದೆ. ಪರಾವಲಂಬಿಗಳು ಎಂದಿಗೂ ಸ್ವತಂತ್ರರಲ್ಲ. ಸ್ತ್ರೀ–ಪುರುಷರ ಸಂಬಂಧ ಪರಸ್ಪರ ಅವಲಂಬನೆ ಇಲ್ಲದಂಥ ಸ್ವತಂತ್ರವೂ ಸಂಗಾತಿತನದ್ದೂ ಆಗಿರಬೇಕು.*

*–ಜವಹರಲಾಲ್ ನೆಹರೂ*

# ಮಹಿಳೆ ಮತ್ತು ಕಾವ್ಯದ ಭಾಷೆ

*(ತಮಿಳುನಾಡಿನ ಮಹಿಳಾ ಕವಿಗಳ ಅನುಭವ)*

ಸಲ್ಮಾ, ಮಾಲತಿ ಮೈತ್ರಿ, ಉಮಾಮಹೇಶ್ವರಿ, ಸಂಗೀತರಾಣಿ, ಕುಟ್ಟಿ ರೇವತಿ ಮುಂತಾದವರು ತಮಿಳುನಾಡಿನ ಖ್ಯಾತ ಮಹಿಳಾ ಕವಿಗಳು, 2003ರ ಅಕ್ಟೋಬರ್‌ನಿಂದ ಪ್ರಾರಂಭವಾದ ದೊಡ್ಡ ವಿವಾದಗಳ ಬಿರುಗಾಳಿಯ ಮಧ್ಯೆ ಸಿಕ್ಕಿಬಿದ್ದರು. ಈ ಎಲ್ಲಾ ಮಹಿಳಾಕವಿಗಳು ಲೈಂಗಿಕತೆ, ಮದುವೆ, ಕುಟುಂಬ, ಸಮಾಜಗಳ ಬಗ್ಗೆ ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸತೊಡಗಿದ್ದರಿಂದ, ಅದರಲ್ಲೂ ಯೋನಿ, ಮೊಲೆಗಳು, ಕಾಮ, ಮುಷ್ಟಿಮೈಥುನ ಮುಂತಾದ ಪದಗಳನ್ನು ತಮ್ಮ ಕವಿತೆಗಳಲ್ಲಿ ಬಳಸತೊಡಗಿದ್ದರಿಂದ ಗಂಡಸರು, ಕೆಲವು ಸಲ ಈ ಕವಿಗಳ ಸಂಗಾತಿಗಳೂ ಸೇರಿದಂತೆ ಅವರ ವಿರುದ್ಧ ಪ್ರತಿಭಟನಾ ಚಳವಳಿ ನಡೆಸತೊಡಗಿದರು. ಈ ಮಹಿಳಾಕವಿಗಳ ವಿರುದ್ಧ ಪ್ರಚಾರ ಮಾಡುತ್ತಿರುವವರಲ್ಲಿ ಚಲನಚಿತ್ರಗಳ ಗೀತ ರಚನಾಕಾರ ಪಳನಿಭಾರತಿ, ಸ್ನೇಹನ್ ಮುಂತಾದ ಅಶ್ಲೀಲತೆ ಛಾಯೆಯುಳ್ಳ ಸಿನಿಮಾ ಹಾಡುಗಳಿಗಾಗಿಯೇ ಪ್ರಸಿದ್ಧರಾದವರೂ ಇರುವುದು ಕುತೂಹಲದ ಸಂಗತಿ. 'ಕಾಲಚುವಡು' ಪತ್ರಿಕೆಯಲ್ಲಿ ಪ್ರಕಟಗೊಂಡ ಮಹಿಳಾಕವಿಗಳ ಕೆಲವು ಕವಿತೆಗಳನ್ನು ಓದಿದ ನಂತರ 2003ರಲ್ಲಿ ಈ ಗಂಡಸರು ಇಂಥ ಹೆಂಗಸರನ್ನು ಸುಟ್ಟು ಹಾಕಬೇಕು ಎಂದು ಘೋಷಿಸಿದರು. ಇವರೆಲ್ಲ ಲೈಂಗಿಕವಾಗಿ ಅತೃಪ್ತರು, ಆದ್ದರಿಂದಲೆ ಇಂಥ ಕವಿತೆಗಳನ್ನು ಬರೆಯುತ್ತಿದ್ದಾರೆ ಎಂದು ಆಕ್ರೋಶಿಸಿದರು. ಪ್ರಸಿದ್ಧ ಪುರುಷ, ಕವಿ, ಅಬ್ದುಲ್ ರೆಹಮಾನ್ ಕೂಡ ಈ ಆಕ್ರಮಣಕಾರರ ಜೊತೆ ಸೇರಿಕೊಂಡು "ಇಂಥ ಕವನಗಳ ಮೂಲಕ ಸ್ತ್ರೀಯರು ಪುರುಷರಿಗೆ 'ಆಹ್ವಾನ' ನೀಡುತ್ತಿದ್ದಾರೆ" ಎಂದು ಹೇಳಿದರೆಂದು ನಂಬಲಾಗಿದೆ.

ಈ ಮಹಿಳಾಕವಿಗಳು ತಮ್ಮ ಕವನಗಳ ಮೂಲಕ ಗಂಡಸಿಗೆ ಹೇಳಬಯಸುತ್ತಿರುವುದು ಅವನು ಹತ್ತಿರ ಬರುವುದು ಯಾವಾಗಲೂ ತನಗೆ ಬೇಕಾದ್ದು ಎಂದೇನೂ ಅಲ್ಲ. ಬಹಳಸಲ ಅವನು ಒರಟಾಗಿ, ಉದಾಸೀನನಾಗಿ, ಸ್ವಾರ್ಥಿಯಾಗಿ ವರ್ತಿಸುತ್ತಾನೆ ಎಂಬುದನ್ನು ತಿಳಿಸುವುದು ತಮ್ಮ ಕವನಗಳ ಉದ್ದೇಶ ಎಂದು ಹೇಳುತ್ತಾರೆ. ಗಂಡಿನ ಸ್ವಾರ್ಥಬುದ್ಧಿಯಿಂದಾಗಿ ಹೆಣ್ಣು ಅನುಭವಿಸುವ ಒಂಟಿತನ, ಅಸಹಾಯಕ ಕ್ರೋಧಗಳ ಬಗ್ಗೆ ಅವರ ಕವನಗಳು ಮಾತನಾಡಲೆತ್ನಿಸುತ್ತವೆ.

ತಮಿಳುನಾಡಿನ ಸ್ತ್ರೀವಾದಿ ಚಳವಳಿಯೊಂದಿಗೆ ಸಂಬಂಧವಿಟ್ಟುಕೊಂಡಿರುವ ಒಬ್ಬ ವಿದುಷಿ ಕುಟ್ಟರೇವತಿ, ತಮ್ಮ ಎರಡನೆಯ ಕವನ ಸಂಕಲನಕ್ಕೆ ಇಟ್ಟ ಹೆಸರು **"ಮೊಲೆಗಳು"**. ಆ ಸಂಕಲನದ ಶೀರ್ಷಿಕೆ ಕವನದ ಅನುವಾದ ಇದು;

**ಎದೆ ಅಥವಾ ಎದ್ದು ಬರುವ ನೀರುಗುಳ್ಳೆಗಳು**
**ಒದ್ದೆ ಜೊಂಡುಹುಲ್ಲಿನ ನಾಡುಗಳು**
**ನಾನು ಅಚ್ಚರಿಯಿಂದ ನೋಡುತ್ತ ಕಾಯ್ದುಕೊಂಡಿದ್ದೆ**
**ಅವು ಕ್ರಮೇಣ ಉಬ್ಬಿ ಅರಳಿಕೊಳ್ಳುವುದನ್ನು**
**ನನ್ನ ಯೌವ್ವನದ ಋತುವಿನ ಕೊನೆಗೆ**
**ಯಾರಿಗೂ ಏನನ್ನೂ ಹೇಳದೆಯೇ**
**ಅವು ಹಾಡತೊಡಗಿದವು**
**ನನ್ನೊಂದಿಗೆ ಯಾವಾಗಲೂ**
**ಪ್ರೀತಿಯನ್ನು**
**ಮತ್ತೇರಿದ್ದನ್ನು**
**ನನ್ನ ತಪಸ್ಸಿನ ಗಳಿಗೆಯಲ್ಲಿ**
**ಅವು ಸ್ವತಂತ್ರವಾಗಿ ಮುಕ್ತಿ ಬಯಸಿದ ಹಾಗೆ**
**ಬೆದೆಯ ಸೆಳೆತಕ್ಕೆ ರಭಸವಾಗಿ ಉಬ್ಬಿ ಏಳುತ್ತವೆ**
**ಹಾಡಿನ ಮೋಹಕ ಅವಸ್ಥೆಯ ನೆನಪುಗಳಲ್ಲಿ ಮುಳುಗಿ**
**ಪೂರ್ಣವಾಗದ ಪ್ರೇಮದ**
**ಎರಡು ಕಣ್ಣೀರ ಹನಿಗಳು**
**ಅವುಗಳ ಎಂದೂ ಒರೆಸಲು ಬರದು**
**ಅವು ಸ್ತಬ್ಧ ಕೊಳದೊಳಗೆ ಅಡಗಿ ಹೊಯ್ದಾಡುತ್ತವೆ.**

ಸಲ್ಮಾ, ತಿರುಚಿರಾಪಳ್ಳಿ ಹತ್ತಿರದ ಒಂದು ಹಳ್ಳಿಯ ಗ್ರಾಮಪಂಚಾಯ್ತಿಯ ಮುಖ್ಯಸ್ಥೆ. ಲೈಂಗಿಕ ಕ್ರಿಯೆಯ ಯಾತನಾದಾಯಕ ಪುನರಾವರ್ತನೆಯ ಬಗ್ಗೆ ಆಳವಾದ ಬೇಗುದಿಯನ್ನು ಅವರ ಕವನಗಳು ಪ್ರತಿಫಲಿಸುತ್ತವೆ. ಲೈಂಗಿಕಕ್ರಿಯೆ ತನ್ನ ಗೃಹಸ್ಥ ಜೀವನವನ್ನು ಕಾಯ್ದಿಡಲು ತಾನು ತೆರಬೇಕಾದ ಬೆಲೆಯಾಗಿ ಆಕೆಗೆ ಕಾಣುತ್ತದೆ. **'ಒಪ್ಪಂದ'** ಎಂಬ ಅವರ ಕವಿತೆಯಲ್ಲಿ ಆಕೆ ಬರೆಯುತ್ತಾರೆ;

ಅಮ್ಮ ಅನ್ನುತ್ತಾಳೆ–ಬೆಡ್ ರೂಂ ನಲ್ಲಿ ಎಲ್ಲ ತಪ್ಪುಗಳೂ ನನ್ನವೇ ಎಂದು.......

**ಚರಿತ್ರೆ ಮತ್ತು ಕಾಲ ನನ್ನ ಜಾಗವನ್ನು ಸ್ಪಷ್ಟಪಡಿಸಿದೆ..........**
**ನಿನ್ನಿಂದ ಅಪವಿತ್ರ ಪ್ರೇಮವನ್ನು ಪಡೆಯಲು**
**ನಿನ್ನ ಮಗುವಿಗೆ ತಾಯಿಯಾಗಿ ಕರ್ತವ್ಯ ಈಡೇರಿಸಲು**
**ಸ್ಯಾನಿಟರಿ ನ್ಯಾಪ್‌ಕಿನ್‌ಗಳಿಗೆ ಗರ್ಭನಿರೋಧಕ ಗುಳಿಗೆಗಳಿಗೆ ಹಣ**
**ಹಾಗೂ ಸಾಧ್ಯವಾದರೆ ನಿನ್ನ ಮೇಲೆ ನೀನು ಕೂಡುವಂತೆ**
**ಒಂದು ಗಳಿಗೆ ಅಧಿಕಾರ ಚಲಾಯಿಸಲು**
**ನನ್ನ ಅರಿವುಳ್ಳ ಯೋನಿ ತಾನೇ ಅಗಲವಾಗುತ್ತೆ,**

ಈ ಮಹಿಳಾ ಕವಿಗಳ ವಿರುದ್ಧ ವಿವಾದಗಳು ಹುಟ್ಟಿಕೊಂಡಾಗಿನಿಂದ ಸಲ್ಮಾಗಂಡ ಆಕೆಯ ವಿರುದ್ಧ ತಿರುಗಿಬಿದ್ದರು. ಮುಸ್ಲಿಂ ಸಮುದಾಯವೂ ಆಕೆಯತ್ತ ಪ್ರಶ್ನಾರ್ಥಕ ನೋಟ ಬೀರುತ್ತಿದೆ. ಕಥಾ ಪ್ರಕಾಶನದ ಪ್ರಶಸ್ತಿ ಪಡೆದಿರುವ ಈ ಕವಿಯನ್ನು ಇದ್ಯಾವುದೂ ದಿಕ್ಕುಗೆಡಿಸಿಲ್ಲ. ಕಥಾ ಪ್ರಶಸ್ತಿ ದೊರೆತ ಆಕೆಯ ಸಾಮಾಜಿಕ ಕಾದಂಬರಿ ಪ್ರಕಟನೆಗೊಳ್ಳುತ್ತಿದೆ.

"ಈ ಬಗೆಯ ಶೃಂಗಾರಕಾವ್ಯವನ್ನೇ ಏಕೆ ರಚಿಸುತ್ತೀರಿ" ಎಂದು ಈ ಲೇಖಕಿಯರನ್ನು ಕೇಳಿದರೆ ಅವರೆಲ್ಲ ಒಕ್ಕೊರಲಿಂದ ಹೇಳುವುದು ತಮ್ಮ ಭಾವನೆಗಳ ಅಭಿವ್ಯಕ್ತಿ ಅದು ಎಂದು. ಲೈಂಗಿಕ ಭಾವನೆಗಳೂ ಇತರ ಭಾವನೆಗಳಷ್ಟೇ ಸಹಜ. ಕವನ ಬರೆಯುವುದೇ ಬದುಕಲು ಹೊರತು ಅದೊಂದು ಜೀವನೋಪಾಯವಲ್ಲ, ಹವ್ಯಾಸವೂ ಅಲ್ಲ. ಅದು 'ಆತ್ಮತೃಪ್ತಿ'ಗೆ ಎನ್ನುತ್ತಾರೆ ಅವರು.

ಮಾಲತಿ ಮೈತ್ರಿ ಅವರ ಕವಿತೆ **'ಭಿನ್ನಪಥ'** ಹೇಳುತ್ತದೆ;

**ಮರಗಳಿಂದ ತುಂಬಿದ ಈ ರಸ್ತೆಗೆ ಕೊನೆಯೆಂಬುದಿಲ್ಲ.**
**ಅದಕ್ಕೆ ನಮ್ಮ ಪದಗಳ ಹಾಸಿದ್ದೇವೆ. ಮತ್ತು**
**ಇದು ಸಾಗುತ್ತದೆ ಇನ್ನೊಂದು ಪದವೂ ಇಲ್ಲವಾಗುವವರೆಗೆ**
**ನನ್ನ ಮತ್ತು ನಿನ್ನ ನಡುವೆ ಆಡಲ್ಪಡುವುದಕ್ಕೆ.**

ಮೈತ್ರಿಯ ಪತಿ ಒಬ್ಬ ಲೇಖಕ. ಆಕೆಯನ್ನು ಅವರು ತ್ಯಜಿಸಿಲ್ಲ. ಪಾಂಡಿಚೆರಿಯಲ್ಲಿ ಇರುವ ಈ ವಸ್ತ್ರವಿನ್ಯಾಸಕಿ ಸಮಾಜದಲ್ಲಿನ ಮಹಿಳೆಯರ ಸ್ಥಾನವನ್ನು ಚಿತ್ರಿಸಲು ಇಚ್ಛಿಸುತ್ತಾರೆ. **'ಮನೆಗಳ ಸಮಾಜ'** ಎಂಬ ಕವನದಲ್ಲಿ ಆಕೆ ಹೇಳುತ್ತಾರೆ:

**ಪಟ್ಟಣದ ಎಲ್ಲ ಮನೆಗಳೂ ಹೆಣ್ಣುಗಳ ಹಾಗೆ**
**ಕಿಟಕಿಗಳೇ ಕಣ್ಣುಗಳು**
**ಯೋನಿಗಳೇ ಅಂಗಳಗಳು**
**ಬದುಕಿಡೀ ಒಬ್ಬ ಪುರುಷನಿಗಾಗಿ ಕಾಯುತ್ತವೆ........**
**ಈ ಮನೆಗಳ ಮಾಡುವ ಗಂಡಸರು**
**ಹೆಣ್ಣುಗಳ ಬೆಳೆಯಗೊಡರು**
**ಕಾಲದೊಳಗೆ ನಿಯಂತ್ರಿತರಾದ ಹೆಣ್ಣುಗಳು**
**ಮನೆಗಳಲ್ಲ.**

ಸಂಗೀತರಾಣಿ, ರಾಣಿಪೇಟೆಯಲ್ಲಿರುವ ಒಬ್ಬ ಶಾಲಾ ಶಿಕ್ಷಕಿ. ಬಾಲ್ಯದಿಂದಲೂ ತನ್ನನ್ನು ತನ್ನ ಸಹೋದರನೊಂದಿಗೆ ತಾರತಮ್ಯಮಾಡಿ ನೋಡುತ್ತಿದ್ದ ಮನೆಜನರ ಬಗ್ಗೆ ಹುಟ್ಟಿದ ಕೋಪದಿಂದ ಆಕೆ ಕವಿತೆ ಬರೆಯತೊಡಗಿದರು. ಮೈತ್ರಿ ಹೇಳುತ್ತಾರೆ. "ಆರ್ಥಿಕ ಸ್ವಾತಂತ್ರ್ಯ, ಉತ್ತಮ ಶಿಕ್ಷಣ, ಸಾಮಾಜಿಕ ಪ್ರಗತಿಗಳ ಫಲವಾಗಿ ಹೊಸತೊಂದು ಭಾಷೆ ಹೊಮ್ಮಿ ಬಂದಿದೆ. ಸಿನಿಮಾ ಹಾಡುಗಳು ಅಶ್ಲೀಲವಾಗಿದ್ದು ಮಹಿಳೆಯರು ಆ ಧೋರಣೆವಿರುದ್ಧ ಪ್ರತಿಭಟಿಸುತ್ತಿದ್ದಾರೆ. ಅದರಿಂದಾಗಿ ನಮ್ಮ ಕಾವ್ಯದ ಭಾಷೆ ವಿರುದ್ಧ ಆ ಚಲನಚಿತ್ರ ಗೀತಕಾರರು ಪ್ರತಿಹೊಡೆತ ನೀಡುತ್ತಿದ್ದಾರೆ." ರೇವತಿಯವರ ಪ್ರಕಾರ ಇಂಥ ಟೀಕೆಗಳನ್ನು ಉದಾಸೀನ ಮಾಡುವುದು ಮತ್ತು ಇಂಥ ಮುಕ್ತಭಾವದ ಕವಿತೆಗಳನ್ನು ಹೆಚ್ಚು ಹೆಚ್ಚಾಗಿ ಬರೆಯುವುದೇ ಇದಕ್ಕೆ ಸರಿಯಾದ ಪ್ರತಿಕ್ರಿಯೆ.

ಈ ಮಹಿಳಾ ಕವಿಗಳು ತಮ್ಮ ಸಮಾನ ಭಾವದ ಗೆಳೆಯರೊಂದಿಗೆ 'ಅನಂಗು' (ಮಹಿಳೆ) ಎಂಬ ಸಂಘಟನೆ ಮಾಡಿಕೊಂಡಿದ್ದಾರೆ. 2003ರ ಮಾರ್ಚ್ 20ರಂದು ಒಂದು ವಿಚಾರಸಂಕಿರಣ ನಡೆಸಿ ತಮ್ಮ ಹಾಗೂ ತಮ್ಮ ಕೃತಿಗಳ ಮೇಲೆ ಹೊರಿಸಲಾದ ಆಪಾದನೆಗಳನ್ನು ತೊಡೆಯುವ ಯತ್ನವನ್ನೂ ಮಾಡಿದರು. ಇವರ ಬೆಂಬಲಕ್ಕೆ ಬಂದ ನಾಡಿನ ಹಿರಿಯಕವಿ ಕೃಷ್ಣ ನಂಗಿನಿ **"ದಮನಗಳು ಕೊನೆಗೊಳ್ಳಬೇಕು"** ಎಂದರು. ಗಂಡಸರು ಹೀಗೆ ಆಕ್ರೋಶ ತೋರುತ್ತಿರುವುದಕ್ಕೆ ಮಾತ್ಸರ್ಯವೇ ಕಾರಣ. ಮಹಿಳೆಯರೂ ಚಲನಚಿತ್ರಗಳಿಗೆ ಹಾಡು ಬರೆಯಲು ಕೈಹಾಕಿಬಿಡಬಹುದು ಎಂದು ಅವರು ಹೆದರಿದ್ದಾರೆ ಎಂದು ಆಕೆ ವಿವರಿಸಿದ್ದಾರೆ.

ಮುಖ್ಯಮಂತ್ರಿ ಕರುಣಾನಿಧಿಯವರ ಮಗಳು ಕನ್ನಿಮೊಳಿ ಸ್ವತಃ ಲೇಖಕಿಯಾಗಿದ್ದು ಈ ಮಹಿಳಾ ಕವಿಗಳ ನಿಲುವನ್ನು ಬೆಂಬಲಿಸಿದರು. ಮಹಿಳಾ ಕವಿಗಳನ್ನು ಸುಟ್ಟುಹಾಕಬೇಕು ಎಂದು ಹೇಳಿದವರ ವಿರುದ್ಧ ಪೊಲೀಸರು ಕ್ರಮ ಕೈಗೊಳ್ಳಬೇಕು, ಹಿಂಸಾಚಾರವನ್ನು ಪ್ರಚೋದಿಸುತ್ತಿರುವುದಕ್ಕಾಗಿ ಅಂಥವರನ್ನು ಬಂಧಿಸಬೇಕೆಂದು ಆಕೆ ಕರೆ ನೀಡಿದರು.

'ಕಾಲಚುವಡು' ಪತ್ರಿಕೆಯ ಸಂಪಾದಕರಾದ ಕಣ್ಣನ್ ಅವರು "ಈ ಮಹಿಳಾ ಬರಹಗಾರರು ಅಥವಾ ಬೇರೆ ಯಾರೇ ಆಗಲಿ ಬರೆದ ಈ ಬಗೆಯ ಮುಕ್ತ ರಚನೆಗಳನ್ನು ಪ್ರಕಟಿಸುವುದನ್ನು ತಾವೇನೂ ನಿಲ್ಲಿಸುವುದಿಲ್ಲ, ಬದಲಾಗಿ ಅವುಗಳನ್ನು ಪ್ರಕಟಿಸಲು ಆನಂದಿಸುತ್ತೇವೆ" ಎಂದು ಹೇಳಿಕೆ ನೀಡಿ ಮಹಿಳಾ ಕಾವ್ಯಕ್ಕೆ ತಮ್ಮ ಬೆಂಬಲ ವ್ಯಕ್ತಪಡಿಸಿದರು.

*(ಮಾರ್ಚ್ 21, 2004ರಂದು ಅಂಬುಜಂ ಅನಂತರಾಮನ್ ಅಂತರ್ಜಾಲದಲ್ಲಿ ಬರೆದ ಒಂದು ಲೇಖನ.)*

---

"ಪ್ರತಿಯೊಬ್ಬ ಹೆಣ್ಣಿನೊಳಗೂ ಇರುವ ಲೆಸ್ಬಿಯನ್, ಹೆಣ್ಣಿನ ಶಕ್ತಿಯ ಒತ್ತಾಯದಿಂದ ಬಲಿಷ್ಠ ಹೆಣ್ಣುಗಳ ಕಡೆಗೆ ಆಕರ್ಷಿತಳಾಗುತ್ತಾಳೆ. ಈ ಶಕ್ತಿ ಮತ್ತು ಚೈತನ್ಯಗಳನ್ನು ಅಭಿವ್ಯಕ್ತಿಸುವ ಸಾಧನವೆಂದು ಆಕೆ ಸಾಹಿತ್ಯದಲ್ಲಿ ಹುಡುಕಾಟ ನಡೆಸುತ್ತಾಳೆ. ನಮ್ಮನ್ನು ಕಲ್ಪನಾಶೀಲವಾಗಲು ಆಗ್ರಹಿಸುವಂಥ ಭಾಷೆಯಲ್ಲಿ ಅದನ್ನು ಅಭಿವ್ಯಕ್ತಿಸಲು ಮತ್ತು ಹೆಣ್ಣು-ಹೆಣ್ಣಿನ ನಡುವಿನ ಪೂರ್ಣ ಸಂಬಂಧವನ್ನು ಹಿಡಿದಿಡಲು ನೆರವಾಗುವುದು ನಮ್ಮಲ್ಲಿರುವ ಈ ಲೆಸ್ಬಿಯನ್ ಅಂಶವೇ. ನಮ್ಮೊಳಗಿರುವ ಈ ಲೆಸ್ಬಿಯನ್ನೇ ನಿಜವಾದ ಸೃಜನಶೀಲತೆ. 'ಪಿತೃಗಳ ನಿಷ್ಠಾವಂತ ಪುತ್ರಿಯರು' ಎನ್ನುವುದು ಬರೀ ಒಂದು ತಟ್ಟು ಕುದುರೆ ಅಷ್ಟೆ" – Adrienne Rich



# ಮಹಿಳಾ ವಿಮರ್ಶೆ ಮತ್ತು ಸಂಶೋಧನೆ

• *ಡಾ. ಪ್ರೀತಿ ಶುಭಚಂದ್ರ*

*(ಹಿಂದಿನ ಸಂಚಿಕೆಯಿಂದ)*

ಮಹಿಳೆಯರ ರಾಜಕೀಯಾತ್ಮಕ ಆರ್ಥಿಕತೆ ಕುರಿತಂತೆ ಸ್ತ್ರೀವಾದಿ ಸಮಾವೇಶದಲ್ಲಿ ಪ್ರಬಂಧ ಮಂಡಿಸುತ್ತಾ ಸಾಹಿತ್ಯ ವಿಮರ್ಶಕಿಯಾಗಿ ತಾನು ಪ್ರಬಂಧದ ವಿಷಯವನ್ನು ಯಾವ ರೀತಿ ಗ್ರಹಿಸಿದ್ದೇನೆ ಎಂಬುದನ್ನು ಸ್ವತಃ ಕಂಡುಕೊಳ್ಳುವ ಉದ್ದೇಶ ಗಾಯಿತ್ರಿ ಸ್ಪೀವಾಕ್‌ರದು. ಜಾಗತಿಕ ಶ್ರಮವಿಭಜನೆಯು ಮಹಿಳಾ ಸ್ಥಿತಿಗತಿಗಳನ್ನು ವಿಚ್ಛಿದ್ರಗೊಳಿಸಿದೆ– ಎಂಬ ತಿಳಿವಳಿಕೆಯ ಬೆಳಕಿನಲ್ಲಿ ವಿಷಯದ ಗ್ರಹಿಕೆ ಯಾವ ಸ್ವರೂಪದ್ದೆಂಬುದನ್ನು ಅವರ ಇಡೀ ಪ್ರಬಂಧ ಕ್ರಿಯಾತ್ಮಕವಾಗಿ ಕಟ್ಟಿಕೊಡುತ್ತದೆ. ಅನುಭವಗಮ್ಯತೆ ಹಾಗೂ ಸೈದ್ಧಾಂತಿಕತೆಗಳೆರಡನ್ನೂ ಏಕಕಾಲಕ್ಕೆ ಒಳಗೊಳ್ಳುತ್ತಾ ಜಾಗತೀಕರಣ ಹಾಗೂ ಮಹಿಳೆಯ ಕುರಿತಂತೆ ಮಹತ್ವದ ಪ್ರಶ್ನೆಗಳನ್ನು ಆಕೆ ಎತ್ತುತ್ತಾರೆ. ಸಂಶೋಧನಾ ಕಾರ್ಯ ಕೈಗೊಳ್ಳಬೇಕಾದ ಕ್ಷೇತ್ರ(field)ವನ್ನು ಸ್ಪೀವಾಕ್ ಅದರೆಲ್ಲ ಸಂಕೀರ್ಣತೆಗಳೊಂದಿಗೆ ಅರ್ಥೈಸಿಕೊಳ್ಳುತ್ತಾರೆ.

ಅಭಿವೃದ್ಧಿಗೊಂಡ ದೇಶಗಳಲ್ಲಿ ಸಾಂಪ್ರದಾಯಿಕ ಕಾರ್ಯಯೋಜನೆಗಳಿಗೆ ಸ್ತ್ರೀವಾದ ಹಾಗೂ ಪರಿಸರವಾದಗಳು ಸವಾಲೊಡ್ಡಿವೆ. ಆದರೆ ಅಭಿವೃದ್ಧಿಗೊಳ್ಳುತ್ತಿರುವ ಭಾರತದಂಥ ದೇಶದಲ್ಲಿಯೂ ಇದೇ ರೀತಿಯ ಸವಾಲುಗಳಿವೆ ಎನ್ನಲಾಗದು. ಅಭಿವೃದ್ಧಿಗೊಳ್ಳುತ್ತಿರುವ ರಾಷ್ಟ್ರಗಳಿಗೆ ಅಭಿವೃದ್ಧಿಗೊಂಡ ದೇಶಗಳಿಗೆದುರಾಗಿರುವ ಸವಾಲುಗಳೇ ಸವಾಲಾಗಿದೆ. ಜಾಗತಿಕ ಶ್ರಮವಿಭಜನೆಯ ಸಂದರ್ಭದಲ್ಲಿ ಮಹಿಳಾವಾದದ ಸ್ವರೂಪ ಹಾಗೂ ಸ್ಥಾನ ಎಂತಹದೆಂಬುದನ್ನು 'ಕ್ಷೇತ್ರ'ದ ಸ್ಥಿತಿ ನಿರ್ಧರಿಸುತ್ತದೆ. ಈ ಕ್ಷೇತ್ರದ ಸ್ಥಿತಿಗೆ ಸಂಬಂಧಿಸಿದಂತೆ ಈ ರೀತಿಯ ನಾಲ್ಕು ಸಾಮಾನ್ಯೀಕೃತ ವಿವರಣೆ ನೀಡಬಹುದಾಗಿದೆ ಎನ್ನುತ್ತಾರೆ, ಸ್ಪೀವಾಕ್:

**I. ಕ್ಷೇತ್ರ(Field)**

1. ಬಹುರಾಷ್ಟ್ರೀಯ ಹಾಗೂ ಸೇವಾಧೀನ ಬಂಡವಾಳಶಾಹಿಗಳ ನಡುವಿನ ದುರುದ್ದೇಶಪೂರಿತ ಒಪ್ಪಂದದ ಪರಿಣಾಮವಾಗಿ ನಗರ ಹಾಗೂ ಅಧಿಕಾರ ರಚನೆಗಳೂ ಇನ್ನೊಂದು ರೀತಿಯಲ್ಲಿ ಮಹಿಳೆಯರ ದುಃಸ್ಥಿತಿಗೆ ಕಾರಣವಾಗಿವೆ.
2. ತೃತೀಯ ಜಗತ್ತಿನ ಸ್ತ್ರೀವಾದಿ ನಾಯಕತ್ವದ ತಾತ್ತ್ವಿಕ ಚೌಕಟ್ಟನ್ನು ಬೂರ್ಜ್ವಾ ರಾಷ್ಟ್ರೀಯತಾವಾದಿ ಪ್ರಭುಸಂಹಿತೆಗಳ ಅವಶ್ಯಕತೆಯಾಗಿ ರೂಪಿಸಲಾಗಿದೆ.
3. ಪಶ್ಚಿಮದ ಸ್ತ್ರೀವಾದಿ ಸಿದ್ಧಾಂತಗಳು ಪ್ರಧಾನವಾಗಿ ಜನಾಂಗ ವೈಶಿಷ್ಟ್ಯವನ್ನು ಕೇಂದ್ರವಾಗಿಟ್ಟುಕೊಂಡಿದ್ದು, ತೃತೀಯ ಜಗತ್ತಿಗೆ ಸಂಬಂಧಪಟ್ಟಂತೆ ನಾಗರಿಕ ಪೂರ್ವಸ್ಥಿತಿಯನ್ನೇ ವೈಭವೀಕರಿಸುತ್ತವೆ. ಮಾರ್ಕ್ಸ್‌ವಾದಿ ಹಿನ್ನೆಲೆಯನ್ನಿಟ್ಟುಕೊಂಡರೂ ಉತ್ಪಾದನಾ ವಿಧಾನ ಕೇಂದ್ರಿತ ನಿರೂಪಣೆಯನ್ನೇ ಇವು ಹೊಂದಿವೆ. ಪಾಶ್ಚಾತ್ಯ ಸಂದರ್ಭದ ಮಾರ್ಕ್ಸಿಸ್ಟ್ ಚಿಂತನೆಯನ್ನೇ ಇವು ಬಳಸಿಕೊಳ್ಳುತ್ತವೆ.
4. ಈ ಜನಾಂಗ ವೈಶಿಷ್ಟ್ಯಕೇಂದ್ರತೆ (enthnocenism)ಯು ದೈಹಿಕ ಪ್ರವೃತ್ತಿಗಳು ಹಾಗೂ ವ್ಯಕ್ತಿಮತ್ತೆ (subject)ಯ ನಿರ್ಮಾಣಘಟಕಗಳ ಕುರಿತಂತೆ ಪಾಶ್ಚಾತ್ಯ ಸ್ತ್ರೀವಾದಿ ಸಿದ್ಧಾಂತಗಳು ನಡೆಸಿರುವ ವಿವೇಚನೆಯಲ್ಲಿ ಪ್ರಧಾನವಾಗಿ ಕಂಡುಬರುತ್ತದೆ.

**II. ಶೋಧಕ(The Investigator)**

'ನಾನು'–ಶೋಧಕ ಕಾರ್ಯದಲ್ಲಿ ತೊಡಗುವ ವ್ಯಕ್ತಿಮತ್ತೆ (subject)ಕುರಿತಂತೆ ಮೂರು ಬಗೆಯ ಸಾಮಾನ್ಯೀಕರಣಗಳನ್ನು ಊಹಿಸಬಹುದು.

ಅ) 19ನೇ ಶತಮಾನದ ಬ್ರಿಟಿಷ್‌ರಿಂದ, ನಾವು ವೀರಯೋಧತ್ವ ಮಾದರಿಯನ್ನು ಚಾರಿತ್ರಿಕವಾಗಿ ತೆಗೆದುಕೊಂಡೆವು. ಸಾಮ್ರಾಜ್ಯಶಾಹಿ ಯುಗದಲ್ಲಿ ಸ್ತ್ರೀವಾದಿ ವ್ಯಕ್ತಿಗತತ್ವಕ್ಕೆ (individualism) ಇದ್ದ ದೊಡ್ಡ ಪಣವೆಂದರೆ– ಮಾನವ ನಿರ್ಮಿತಿ. ವ್ಯಕ್ತಿಗತಾವಾದಿಯಾದ ವ್ಯಕ್ತಿಮತ್ತೆಯ ನಿರ್ಮಾಣವು ಎರಡು ರೂಪದಲ್ಲಿ ಪ್ರಕಟಗೊಂಡಿತು. ಶಿಶುಧಾರಣೆ ಹಾಗೂ ಆತ್ಮರೂಪಣೆಯ ಮಾದರಿಗಳು. ಶಿಶುಧಾರಣೆಯ ಮಾದರಿಯ ಮಹಿಳೆ ಖಾಸಗಿ ವಲಯದ್ದೆಂದಾದರೆ, ಆತ್ಮರೂಪಣೆಯ ಪುರುಷ ಮಾದರಿ ಸಾರ್ವಜನಿಕ ವಲಯದ್ದೆಂದು ತಿಳಿಯಲಾಗಿತ್ತು. ಮೊದಲನೆಯ ವ್ಯಕ್ತಿಮತ್ತೆಯ ರೂಪವು ಕೌಟುಂಬಿಕ ಸಾಮಾಜಿಕ ಮೂಲಕದ ಲೈಂಗಿಕ ಪ್ರಜನನ ರೂಪಿಯಾದ ಸಂಗಾತಿಪ್ರೇಮದ ಮಾದರಿ. ಎರಡನೆಯದು ನಾಗರಿಕ–ಸಾಮಾಜಿಕ ಕಾರ್ಯಯೋಜನೆಯುಳ್ಳ ಸಾಮ್ರಾಜ್ಯಶಾಹಿ ಕಾರ್ಯಮಾದರಿ. ಮಹಿಳಾವ್ಯಕ್ತಿತ್ವವಾದಿಯು ಈ ಎರಡೂ ಮಾದರಿಗಳ ವಲಯದಲ್ಲಿ ಪುರುಷನೊಂದಿಗಿನ ಹೋರಾಟದ ಮೂಲಕ ತನ್ನ ಪಾಲನ್ನು ಪಡೆವ ಹೋರಾಟದಲ್ಲಿ ಹೊರಗೆ ಇಡಲ್ಪಟ್ಟಳು. ಪರಿಣಾಮವಾಗಿ, 'ಸೂಚಕ'ತ್ವದ ಅವಕಾಶವನ್ನು ಈ ಹೋರಾಟದ ಸಂಹಿತೆಯಲ್ಲಿ ದೇಶ್ಯ ಮಹಿಳೆ (native woman)ಪಡೆಯಲಿಲ್ಲ. ಹಾಗಾಗಿ ಪ್ರತಿಷ್ಠಿತ ನಗರ ಸಂದರ್ಭದ ಹಿನ್ನಲೆಯಲ್ಲಿ ಇಡೀ ವಿದ್ಯಮಾನವನ್ನು ಓದುಗರು ಗ್ರಹಿಸಿದರೆ, ವೀರಯೋಧಾತ್ಮಕ ಮಹಿಳಾ ವ್ಯಕ್ತಿಮತ್ತೆಯ ಚರಿತ್ರೆಯ ಅವಲೋಕನ ದೊರಕುತ್ತದೆ. ವ್ಯಕ್ತಿಗತಾವಾದಿಯಾಗುವಲ್ಲಿನ ಮಹಿಳೆಯ ಚರಿತ್ರೆಯ ಸಮ್ಮೋಹನಾತ್ಮಕತೆಯಿಂದ –ಮಹಿಳಾ ರಾಜಕೀಯಾತ್ಮಕ ಆರ್ಥಿಕತೆಯ


ಸ್ಪೀವಾಕ್

ಬಗ್ಗೆ ಧೇನುಸುತ್ತಿರುವ, ಶೋಧಿಸುತ್ತಿರುವ ಸಾಹಿತ್ಯ ವಿಮರ್ಶಕರು ಇನ್ನೂ ಬಿಡುಗಡೆ ಹೊಂದಿಲ್ಲ.

ಆ) ಶೋಧಕರ ಕಾರ್ಯಕ್ಷೇತ್ರವು ಅಕಡೆಮಿಕ್ ವಲಯದ್ದಾಗಿದ್ದು, ಆ ವಲಯವು ವರ್ಗೀಯ ತಾರತಮ್ಯಗಳಿಂದ ಸ್ವಲ್ಪಮಟ್ಟಿಗೆ ಬಿಡುಗಡೆಗೊಂಡ ವಿಶೇಷ ಸವಲತ್ತುಗಳ ವಲಯ. ಈ ವಲಯದಾಚೆ ಕೆಳಜಾತಿ ವರ್ಗಗಳು ಅನುಭವಿಸುವ ಶೋಷಣೆಗಳ ಜೊತೆಗೆ ಆ ವರ್ಗಗಳಲ್ಲಿ ಮಹಿಳೆಯಾಗಿ ಮತ್ತೂ ಹೆಚ್ಚಿನ ದಮನಕ್ಕೊಳಗಾದ ಮಹಿಳೆಯರ ಅನುಭವಲೋಕವಿದೆ.




ಸಂಶೋಧಕರು ಈ ವಲಯದಲ್ಲಿ ಬೇರೂರದೆ ಸಾಂಸ್ಥಿಕ ರಚನೆಯ ಎಲ್ಲ ಮಿತಿಗಳನ್ನು ಒಳಗೊಳ್ಳುವ ಸಾಧ್ಯತೆ ಇದೆ. ಅಕೆಡಮಿಕ್ ಸ್ತ್ರೀವಾದಿ ಆಕ್ಟಿವಿಸ್ಟ್‌ಗಳು ಕೂಡ ಪುರುಷರೆದುರಿಗಿನ ಅಲ್ಪಸಂಖ್ಯಾತ ಸ್ಪರ್ಧಿಗಳಾಗಿದ್ದು, ಆಡಳಿತಾತ್ಮಕ ಅವಕಾಶಗಳ ಉನ್ನತಿಯ ಪ್ರಯತ್ನದಲ್ಲಿ ತಮ್ಮದೇ ಆದ ವರ್ಗ, ವರ್ಣೀಯ ಗ್ರಹಿಕೆಗಳನ್ನು ಹೊಂದಿರುತ್ತಾರೆ. ಪ್ರಪಂಚದ ಅತ್ಯಂತ ಕೆಳಸ್ತರ, ಕೆಳ ಜಾತಿವರ್ಗಗಳ ಮಹಿಳೆಯರ ಬೇಡಿಕೆಗಳ ಬಗೆಗಿನ ಅಕೆಡಮಿಕ್ ಮಹಿಳೆಯರ ಮಾತುಗಳು ಅಪ್ರಾಮಾಣಿಕವಾಗಿಬಿಡುತ್ತದೆ. ತಾವು ಕೈಗೆತ್ತಿಕೊಳ್ಳುವ ಮಹಿಳಾ ಶೋಷಣೆಯ ವಿಷಯವೇ ಹಾಗಾಗಿ ಅಕೆಡಮಿಕ್ ವಲಯದ ಸ್ತ್ರೀವಾದಿಗಳಿಗೆ ವಿಶೇಷ ಸವಲತ್ತಾಗಿ ಬಿಡುತ್ತದೆ. ಹಾಗಾಗಿ ಮಹಿಳಾ ಸಮಸ್ಯೆಗಳ ಶೋಧದಲ್ಲಿ – ಮಹಿಳೆಯರು ಹಾಗೂ ಗಂಡಸರು ಎಂಬ ಲೈಂಗಿಕ ಲಿಂಗಬೇಧಕ್ಕಿಂತ ಮುಖ್ಯವಾಗಿ ಕಂಡುಕೊಳ್ಳಬೇಕಾದ ಸಂಗತಿ ಇದೆ. ಅದು ಏನೆಂದರೆ, ರಾಜಕೀಯಾತ್ಮಕ ಆರ್ಥಿಕತೆಯು ಕೇವಲ ವ್ಯಾಪಾರಿ ಒಕ್ಕೂಟದ ಮಹಿಳೆಯರು, ಕಾರ್ಮಿಕ ಮಹಿಳೆಯರು, ತೃತೀಯ ಜಗತ್ತಿನ ಮಹಿಳೆಯರು– ಇಷ್ಟನ್ನೇ ಕೇಂದ್ರವಾಗಿಟ್ಟುಕೊಳ್ಳುವ ಚರ್ಚೆಯ ಸಂಗತಿಯಲ್ಲ. ಈ ಮಹಿಳಾ ಸಮುದಾಯದಲ್ಲಿ ಮೇಲ್ಮುಖ ಚಲನೆಯುಳ್ಳ ಸಾಂಸ್ಥಿಕ ಶೈಕ್ಷಣಿಕ ವಲಯದ ಸಂಶೋಧಕ ಮಹಿಳೆಯೂ ಸೇರುತ್ತಾಳೆ. (ಅರವಿಂದ ಮಾಲಗತ್ತಿಯವರ 'ದಲಿತ ಸ್ತ್ರೀವಾದ' ಮೀಮಾಂಸೆ ಇದೇ ಆಶಯವನ್ನು ಒಳಗೊಂಡಿದೆ)

ಇ) ವಸಾಹತೋತ್ತರ ಸಂದರ್ಭದ ಸಂಶೋಧಕ ವ್ಯಕ್ತಿಯು ಜಾಗತಿಕವಾಗಿ ಹೊಂದಿರುವ ಅಧಿಕಾರಸ್ತರ ಮುಖ್ಯವಾಗುತ್ತದೆ. ರಾಷ್ಟ್ರಗಳ ನಡುವಿನ ಶೋಷಕ–ಶೋಷಿತ ಸಂಬಂಧದಲ್ಲಿ ಸಂಶೋಧಕ ವ್ಯಕ್ತಿ ಹೊಂದಿರುವ ನೆಲೆ ಮುಖ್ಯ. ಪರಸ್ಪರ ಭಿನ್ನ ಸಂಸ್ಕೃತಿಗಳ ನಡುವಿನ ಕೊಡುಕೊಳುಗೆಯ ಕಾರ್ಯಕ್ರಮಗಳಿಗೆ ತೃತೀಯ ಜಗತ್ತಿನ ಮಹಿಳೆಯರು ಹೆಚ್ಚು ಸ್ಪಂದಿಸುತ್ತಾರೆ. ಮೊದಲ ಶ್ರೇಣಿ ರಾಷ್ಟ್ರಗಳೊಂದಿಗೆ ಸಾಂಸ್ಕೃತಿಕ ವಿನಿಮಯ ಸಾಧಿಸುವಲ್ಲಿ ಅವರು ಹೆಚ್ಚು ಆಸಕ್ತರು. ಈ ಪ್ರಯತ್ನದಲ್ಲಿ ರಾಷ್ಟ್ರಗಳ ಭೌಗೋಳಿಕತೆಯ ರಚನೆಯ ಚರಿತ್ರೆ ಅಷ್ಟು ಮುಖ್ಯವಾಗದು. ತೃತೀಯವಿಶ್ವದ ಮಾಹಿತಿ ಸಂಗ್ರಾಹಕರು ಈಗಾಗಲೇ ಪ್ರತಿಷ್ಠಿತ ನಗರ ವ್ಯಕ್ತಿಗಳಿಂದ ಸಾಮಾಜಿಕವಾಗಿ ಸಿದ್ಧಗೊಂಡ ಅಂತರ್‌ಜಾಲದ ಒಳಗಡೆಯೇ ತಮ್ಮ ಸಾಂಸ್ಕೃತಿಕ ವಿನಿಮಯ ಕಾರ್ಯವನ್ನು ಕೈಗೊಳ್ಳಬೇಕಾಗುತ್ತದೆ. ಆದರೆ, ಆದ್ಯ ರಾಷ್ಟ್ರಗಳ ಮಾಹಿತಿ ಸಂಗ್ರಹಕರು ತೃತೀಯ ರಾಷ್ಟ್ರಗಳೊಂದಿಗೆ ಸಾಂಸ್ಕೃತಿಕ ವಿನಿಮಯ ಗುರಿಯುಳ್ಳ ಶೋಧ ಕೈಗೊಂಡಾಗ ಅದು ಸ್ವಾಧೀನಪಡಿಸುವಿಕೆ ಎಂದು ಅರ್ಥವಾಗುತ್ತದೆ. (ಸಾಂಸ್ಕೃತಿಕ ವಿನಿಮಯ ಕಾರ್ಯಕ್ರಮದಡಿ ಜಪಾನಿಗೆ ಒಂದು ವರ್ಷದ ಮಟ್ಟಿಗೆ ಭೇಟಿ ನೀಡಿದ ತರುಣಿಯೊಬ್ಬಳಿಗಾದ ಸಾಂಸ್ಕೃತಿಕ ಆಘಾತ ಇಂಥ ಆಕ್ರಮಣಶೀಲತೆಗೆ ಉದಾಹರಣೆ. ತನ್ನಷ್ಟಕ್ಕೆ ತಾನು ಹೋಟೆಲಿನಲ್ಲೋ ಪಾರ್ಕ್‌ನಲ್ಲೋ ಕುಳಿತಿದ್ದ ಈಕೆಯನ್ನು ಜಪಾನಿ ಗಂಡಸರು ಸಮೀಪಿಸಿ ಲೈಂಗಿಕಸೇವೆಗೆ ನೀವು ಸಿದ್ಧರೇ ಎಂದು ವಿನಯದಿಂದಲೇ ಕೇಳಿಕೊಂಡದ್ದು ಆಕೆಗೆ ಅತ್ಯಂತ ಜುಗುಪ್ಸೆಯ ವಿಷಯವಾಗಿತ್ತು ಎಂಬುದು ಸ್ಪಿವಾಕ್‌ರ ಈ ಲೇಖನ ಓದುವಾಗ ನೆನಪಿಗೆ ಬಂತು). ಸ್ತ್ರೀವಾದಿ, ಪುರುಷವಾದಿ ಇಲ್ಲವೆ ಎಡ–ಬಲ ಎಂಬ ಹೆಸರಿನ ವಸ್ತು ವ್ಯಾಪಾರದ ಮೂಲಕ ಈ ಆಕ್ರಮಣ ನಡೆಯುತ್ತದೆ. ಮನೋವಿಶ್ಲೇಷಕಿಯಾಗೋ ರಾಜಕೀಯಾತ್ಮಕ ಆರ್ಥಿಕ ವಿಜ್ಞಾನಿಯಾಗಿಯೋ ತೊಡಗುವ ಸಾಹಿತ್ಯ ವಿಮರ್ಶಕರಿಗೆ ತಮ್ಮ ಅಧ್ಯಯನ ಶಿಸ್ತುಗಳು ಹೊಂದಬಹುದಾದ ಸಾಮಾಜಿಕ ಮೌಲ್ಯಗಳ ಬಗ್ಗೆ ತಮ್ಮದೇ ಊಹಾತ್ಮಕ ಭ್ರಮೆಗಳಿರಬಹುದು. ಸಂಶೋಧಕ ಕ್ಷೇತ್ರ, ಶೋಧಕ ವ್ಯಕ್ತಿಮತ್ತೆಯ ಕುರಿತಾದ ಮೇಲಿನ ಸಾಮಾನ್ಯೀಕರಣಗಳಿಗೆ ಸಾಹಿತ್ಯ ವಿಮರ್ಶಕಿ ಗಮನಕೊಡದಿದ್ದರೆ, ಇಲ್ಲ ತಿರಸ್ಕರಿಸಿದರೆ, ಅಂತರ್‌ಶಿಸ್ತೀಯತೆಯನ್ನು ಒಳಗೊಳ್ಳುವ ಕಾರಣ ಕೃತಕವಾಗಿ ಸ್ವಂತ ತನ್ನನ್ನು ತಾನೇ ಸಂಶೋಧನಾ ಕ್ಷೇತ್ರದಲ್ಲಿ ಅಂಚಿಗೆ ಒತ್ತರಿಸಿಕೊಳ್ಳುವ ಕ್ರಿಯೆಗೆ ಮುಂದಾಗುತ್ತಾಳೆ.

ಈ) 1974ರಿಂದೀಚೆಗೆ ಅಭಿವೃದ್ಧಿಗೊಂಡ ಹಾಗೂ ಅಧೀನ ರಾಷ್ಟ್ರಗಳ ನಡುವಿನ ಸಂಬಂಧ ಬದಲಾಗಿದೆ. ಆರ್ಥಿಕ ಬಂಡವಾಳದ ಚಲಾವಣೆಯ ವೇಗವು ವಿದ್ಯುನ್ಮಾನ ಜಾಲದ ಕಾರಣ ಬೆಳಕಿನ ವೇಗದಷ್ಟಾಗಿದೆ. ವಿದೇಶೀ ಹಣಹೂಡಿಕೆಯನ್ನು ಆಕರ್ಷಿಸುವ ಸಲುವಾಗಿ ಅಭಿವೃದ್ಧಿಗೊಳ್ಳುತ್ತಿರುವ ದೇಶಗಳು ಅನುಸರಿಸುವ ಉದಾರ ಹಾಗೂ ಮುಕ್ತ ವ್ಯಾಪಾರ ನೀತಿಯು ರಾಷ್ಟ್ರೀಯ ಪರಮಾಧಿಕಾರತ್ವವನ್ನು ಪ್ರಶ್ನಿಸುವಂಥ ಹೊಸ ಆಲೋಚನೆಗಳಿಗೆಡೆ ಮಾಡಿಕೊಟ್ಟಿದೆ. ರಾಷ್ಟ್ರತನ (Nation hood)ದ ಪರಿಕಲ್ಪನೆಯ ಜೊತೆ ಕುತೂಹಲಕಾರಿ ಸಂಬಂಧವನ್ನು ಸಂಸ್ಕೃತಿ ಪರಿಕಲ್ಪನೆಗಳು ಹೊಂದಿವೆ. ಅಂತಾರಾಷ್ಟ್ರೀಯ ಶ್ರಮವಿಭಜನೆಯಲ್ಲಾದ ವ್ಯತ್ಯಾಸಗಳು ರಾಷ್ಟ್ರೀಯ ಪರಮಾಧಿಕಾರದ ಬಗೆಗಿನ ಧೋರಣೆಗಳನ್ನು ಪ್ರಶ್ನಿಸುತ್ತಿವೆ. ಹಾಗಾಗಿ ಸಂಸ್ಕೃತಿ ಕುರಿತ

ಎಲ್ಲ ಬಗೆಯ ಪರಿಶೋಧಗಳು ಈ ಸಂಗತಿಯನ್ನು ಲಕ್ಷ್ಯದಲ್ಲಿಡ ಬೇಕಾಗುತ್ತದೆ. ಹೊಸಬಗೆಯ ಸಾಮ್ರಾಜ್ಯಶಾಹಿ ವ್ಯಾಪಾರ ನೀತಿಯಡಿ ಪಿತೃಪ್ರಧಾನ ವ್ಯವಸ್ಥೆಯ ಬಲಿಪಶುಗಳಾಗಿರುವ, ಕನಿಷ್ಠ ಕೂಲಿಗಿಂತ ಕಡಿಮೆ ಸಂಬಳಕ್ಕೆ ದುಡಿವ ಬಹುಸಂಖ್ಯಾತ ಮಹಿಳೆಯರು 'ಅಂತರರಾಷ್ಟ್ರೀಯ ನವ ವಸಾಹತು ವ್ಯಕ್ತಿಮತ್ತೆ'ಗಳಾಗಿ ಪರಿಣಮಿಸಿದ್ದಾರೆ. ಇವರ ಉತ್ಪಾದನೆಯು ವಸಾಹತೀಯ ವ್ಯಕ್ತಿಮತ್ತೆಯ ಉತ್ಪಾದನೆಗಿಂತ ಭಿನ್ನ. ಉತ್ಪಾದನಾ ಕಾರ್ಯದ ವಿವಿಧ ಹಂತಗಳು ಭೌಗೋಳಿಕವಾಗಿ ಪ್ರಪಂಚದ ಬೇರೆಡೆಗಳಲ್ಲೆಲ್ಲ ಚದುರಿಹೋಗಿದ್ದು ಒಂದೇ ಕಡೆ ನಡೆಯುವ ಸ್ಥಿತಿ ಈಗಿಲ್ಲ. ಹಾಗಾಗಿ ಸೂಕ್ಷ್ಮ, ಪುನರಾವರ್ತಿತ, ದೇಹಶ್ರಮದ ಕಾರ್ಯಗಳು ಕಡಿತಗೊಂಡಿವೆ. ಈ ರೀತಿಯ ವಿಚ್ಛಿದ್ರೀಕರಣ ಕಾರಣ, ಕೆಲಸಗಾರರ ತರಬೇತಿ ಅವಧಿಯೂ ಕಡಿಮೆಯಾಗಿದ್ದು, ಕೈಗಾರಿಕೆಗಳು ಅತ್ಯಂತ ಮುಕ್ತ ನಮ್ಯ ರೀತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಇದರ ಪರಿಣಾಮವಾಗಿ ತಮ್ಮ ಶ್ರಮದ ಮೇಲೆ ಅಧಿಕಾರವನ್ನು ಕಾರ್ಮಿಕರು ಹೊಂದಲಾಗದಂತೆ ಮಾಡಲಾಗುತ್ತಿದೆ. ಆ ಮೂಲಕ ಆರ್ಥಿಕ ವಿಸ್ತಾರ ಕಲ್ಪಿಸುವಲ್ಲಿ ಕಾರಣರಾದ ಕಾರ್ಮಿಕರ ಐಕ್ಯಕ್ಕೆ ಕಾರಣವಾಗಬಹುದಾದ ಅಭಿವೃದ್ಧಿ ಪ್ರಕ್ರಿಯೆಯನ್ನು ನಾಶಮಾಡಲಾಗುತ್ತಿದೆ. ಲಾಭಾಂಶದ ಪುನರ್‌ಹಂಚಿಕೆಯು ಸರ್ಕಾರ ಅಥವಾ ಕಾರ್ಮಿಕ ಒಕ್ಕೂಟದ ಮೂಲಕ ಆಗುವುದನ್ನೂ ತಪ್ಪಿಸಲಾಯ್ತು.

ಭೌಗೋಳಿಕ ಗಡಿಕೇಂದ್ರಿತ ಸಾಮ್ರಾಜ್ಯಶಾಹಿಯ ದಿನಗಳಲ್ಲಿ ಹೊಸ ರೀತಿಯ ಶಿಕ್ಷಣ ವ್ಯವಸ್ಥೆ, ಕಾನೂನು ಸಂಹಿತೆ, ಇತ್ಯಾದಿಗಳು ಜನರ ಮನಸ್ಸು ಹಾಗೂ ವ್ಯಕ್ತಿಗಳನ್ನು ಆಕ್ರಮಣಕಾರಿಯಾಗಿಯೇ ಬದಲಿಸ ಲೆತ್ನಿಸಿದವು. ಇದರ ಪರಿಣಾಮವೋ ಎಂಬಂತೆ ವಸಾಹತು ವ್ಯಕ್ತಿಗತಾತ್ಮಕತೆಗೋಸ್ಕರ ಹೋರಾಟದಲ್ಲಿ ಪಾಲ್ಗೊಳ್ಳುವ ಅವಕಾಶ ಒದಗಿಬಂತು.

ಆಧುನಿಕೋತ್ತರ ವಿದ್ಯುನ್ಮಾನೀಯ ಬಂಡವಾಳಶಾಹಿ ಯುಗದ ಅಂತಾರಾಷ್ಟ್ರೀಯ ಉಪಗುತ್ತಿಗೆ ವಹಿವಾಟಿನಲ್ಲಿ ವ್ಯಕ್ತಿಮತ್ತೆಯ ನಿರ್ಮಾಣದ ಅಗತ್ಯವಿಲ್ಲ. ಖಾಯಂ ತಾತ್ಕಾಲಿಕ ಕೆಲಸಗಾರರ ಪಡೆಗೋಸ್ಕರ ಯಾವುದೇ ಕಾನೂನು ರಚನೆಗಳನ್ನು ರೂಪಿಸುವ ಅಗತ್ಯ ಇಲ್ಲ. ಸುರಕ್ಷಿತವಾಗಿ ಅವರನ್ನು ನಿಯಂತ್ರಿಸುವ ಗುರಿ ಮಾತ್ರವಿದೆ. ಗ್ರಾಹಕತ್ವಕ್ಕೆ ಸಂಬಂಧಿಸಿದ ಸಮರ್ಪಕ ತರಬೇತಿಯೂ ಅಗತ್ಯವೆನಿಸದು. ಕೈಗಾರಿಕೆಗಳು ಎಲ್ಲಿಗೆ ಬೇಕಾದರೂ ಸ್ಥಳಾಂತರಗೊಳ್ಳಬಹುದು. ಯಾಕೆಂದರೆ ಮಾರುಕಟ್ಟೆಗಳು ಎಲ್ಲೆಲ್ಲೂ ಇವೆ. ವಿದ್ಯುನ್ಮಾನೀಯ ಬಂಡವಾಳಶಾಹಿತನವು ಕಾರ್ಮಿಕ ಹೆಂಗಸರು ಹಾಗೂ ಗಂಡಸರನ್ನು ಆಧುನಿಕೋತ್ತರ ಸಂಸ್ಕೃತಿಯೊಳಗೆ ಪ್ರವೇಶಿಸದಂತೆ ತಡೆದಿವೆ. ಅವರು ಊಳಿಗಮಾನ್ಯ ಅಧಿಕಾರ ವ್ಯವಸ್ಥೆಯೊಳಗೆ ಪುನಃ ಪ್ರವೇಶ ಹೊಂದು ತ್ತಿದ್ದಾರೆ. ಈ ವ್ಯವಸ್ಥೆಯನ್ನು ಮಹಿಳೆ ಮನೆ ಹಾಗೂ ಕೆಲಸದ ಕ್ಷೇತ್ರವೆರಡೂ ನೆಲೆಯಲ್ಲಿ ಎದುರಿಸಬೇಕಾಗಿದೆ. ಮತ್ತೀಯ, ಊಳಿಗಮಾನ್ಯ ಹಾಗೂ ಬೂರ್ಜ್ವಾ ಅಧಿಕಾರ ರೂಪಗಳನ್ನು ಏಕಕಾಲಕ್ಕೆ ಮಹಿಳೆ ಎದುರಿಸ ಬೇಕಾಗಿದೆ. ಈ ಹೊಸ ಬಗೆಯ ಊಳಿಗಶಾಹಿ ವ್ಯವಸ್ಥೆಯಲ್ಲಿ ಗಂಡಸರನ್ನು ಮಹಿಳೆಯರಿಗೆ ವಿರುದ್ಧವಾಗಿ ನಿಲ್ಲಿಸಲಾಗುತ್ತದೆ. ವಲಸೆ ಹೋದ ಕಾರ್ಮಿಕರೂ ಆದ್ಯ ರಾಷ್ಟ್ರಗಳಲ್ಲಿ ಜನಾಂಗೀಯ ದಬ್ಬಾಳಿಕೆ ಗುರಿಯಾದುದುಂಟು. ಆದರೆ ಇದಕ್ಕೂ ತೃತೀಯ ದೇಶಗಳ ಸ್ಥಿತಿಗೂ ಇರುವ ವ್ಯತ್ಯಾಸಗಳನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ಮಹಿಳೆಯರ ರಾಜಕೀಯಾತ್ಮಕ ಆರ್ಥಿಕತೆ ಬಗೆಗಿನ ಶೋಧನಾ ಕಾರ್ಯವನ್ನು ಇನ್ನಿತರ ಅಧ್ಯಯನ ಶಿಸ್ತುಗಳಲ್ಲಿಟ್ಟು ಹೊಸ ಬಗೆಯ ಅರ್ಥಗ್ರಹಣವನ್ನು ಮಾಡಬೇಕಾದ ಅಗತ್ಯ ಸಾಹಿತ್ಯ ವಿಮರ್ಶಕಿಯದು. ಆ ಅನ್ಯಶಿಸ್ತು ಅನುಭವಗಮ್ಯವಿದ್ದರೂ ಚಿಂತೆ ಇಲ್ಲ. ಅನ್ಯ ಶಿಸ್ತುಗಳ ಸಾಂಸ್ಥಿಕ ತಳಹದಿಯ ಸ್ಪಷ್ಟ ತಿಳಿವಳಿಕೆಯೂ ಬೇಕು. ತೃತೀಯ ರಾಷ್ಟ್ರದ ಕಾರ್ಮಿಕ ಮಹಿಳೆಯನ್ನು ವ್ಯಕ್ತಿಮತ್ತೆ (subject)ಯಾಗಿಟ್ಟುಕೊಂಡು ಅನ್ಯಶಿಸ್ತೀಯ ಸಂಶೋಧನೆಗೆ ರಕ್ತಮಾಂಸ ನೀಡಿ ಜೀವಂತಿಕೆ ಕಂಗೊಳಿಸುವಂತೆ ಸಾಹಿತ್ಯ ವಿಮರ್ಶೆ ಮಾಡಬೇಕಿದೆ.

ನಮಗೆ ತಿಳಿದಿರುವ ವ್ಯಕ್ತಿಮತ್ತೆಯ ನಿರ್ಮಾಣ ಸಿದ್ಧಾಂತಗಳು ಮನೋವಿಶ್ಲೇಷಣಾತ್ಮಕವೋ ಅಥವಾ ಪ್ರತಿ-ಮನೋವಿಶ್ಲೇಷಣಾತ್ಮಕವೋ ಆಗಿರಬಲ್ಲವು. ಈ ಸಿದ್ಧಾಂತಗಳು ಅಧಿಕಾರ, ಗಂಡು, ವಸಾಹತುಗಳ subject ಅನ್ನು ವಿವರಿಸಲು ಬಳಸಿಕೊಂಡಾಗ ಅವು ಓದುವಿಕೆಯ ದೃಷ್ಟಾಂತರೂಪಗಳಾಗುತ್ತವೆ. ಆಗ ಅವು ರಾಚನಿಕ ನೆಲೆಯ ಮನೋ ವಿಶ್ಲೇಷಣೆಯ ನೆಲೆಗಿಂತ ಭಿನ್ನವಾದ ರೋಗ ಪರೀಕ್ಷಾತ್ಮಕತೆಯ ಮುದ್ರಿಕೆಯಾಗಿಬಿಡುತ್ತವೆ. ಇಂಥ ಸಾಮಾನ್ಯೀಕರಣದಿಂದಾಗಿ, ಮಹಿಳಾ ಅಧಿಕಾರ ಕಾರ್ಯದ ವಿವರಣೆಯು ಅಂಥ ಓದುವಿಕೆಯ ದೃಷ್ಟಾಂತಗಳ ವಿರುದ್ಧ ಸ್ಥಿತಿಯಾಗುತ್ತದೆ. ಈ ರೀತಿಯ ಮನೋವಿಶ್ಲೇಷಣೆ ಆಧರಿತ ಆಟವನ್ನು ಮೀರಿ ತೃತೀಯ ಜಗತ್ತಿನ ಮಹಿಳಾ ಉಪ-ಕಾರ್ಮಿಕತ್ವವು ಹೇಗೆ ಪ್ರಕಟವಾಗಿದೆ ಎಂಬುದೇ ಮುಖ್ಯವಾಗುತ್ತದೆ,

ಸಾಹಿತ್ಯ ಅಧ್ಯಯನಕಾರರಾಗಿ, ರಚಕರಾಗಿ, ಭಾಷೆಯನ್ನು ಒಂದು ಸವಲತ್ತಾಗಿ ನಾವು ಹೊಂದಿದ್ದೇವೆ. ಈ ಸವಲತ್ತನ್ನು ಇಲ್ಲವಾಗಿಸುವಂತಹ ಪ್ರಸ್ತುತ ವಿಧಾನಗಳು ಈಗಾಗಲೇ ನಡೆದಿರುವಂಥವೇ ಆಗಿವೆ. ಸಂಕಥನ, ಪಠ್ಯ, ಅರ್ಥಸಂರಚನೆ ಮುಂತಾದವು ಭಾಷೆಯ ರೂಪಕದ ಮಾಧ್ಯಮವೇ ಆಗಿವೆ. ಸಾಹಿತ್ಯಕ-ತಾತ್ವಿಕ ವ್ಯವಸ್ಥೆಗಳ ಪರವಾಗಿ ನಿಲ್ಲುವ ಮನೋ ವಿಶ್ಲೇಷಣಾ ವಿಧಾನವು ಈ ಬಗೆಯ ಸವಲತ್ತಿಗೆ ನಿರೋಧಕಶಕ್ತಿಯನ್ನು ಬೆಳೆಸಿಕೊಂಡಿಲ್ಲ. ನಿಕೊಲಸ್ ಅಬ್ರಾಹಂ, ಮಾರಿಯಾ ತೊರೊಕ್‌ರಂಥ ಸಾಹಿತ್ಯಕ ವಿಮರ್ಶಕರು ಮನೋವಿಶ್ಲೇಷಣೆಯ ವಿಧಾನವನ್ನು ಭಾಷಿಕ ಘಟಕಗಳ ಬೇರ್ಪಡುವಿಕೆ ಹಾಗೂ ಅವುಗಳ ಒಗ್ಗೂಡುವಿಕೆಯ ವಿಧಾನದ ರೀತಿಯಲ್ಲಿ ಬಳಸಿಕೊಳ್ಳುತ್ತಾರೆ. ಪುರುಷಾತ್ಮಕ ಅಥವಾ ವಸಾಹತು ಅಧಿಕಾರದ ಪರೀಕ್ಷೆಗೆ ಈ ರೀತಿಯ ವಿಧಾನವೇ ಒಂದು ದೃಷ್ಟಾಂತವಾಗ ಬಲ್ಲದು. ಈ ನಿಟ್ಟಿನಿಂದ ನೋಡಿದಾಗ ಮನೋವಿಶ್ಲೇಣಾತ್ಮಕ ಜೀವನ ಚರಿತೆಯ ಅಧ್ಯಯನವು ಭಾಷೆಗಳ ಬಗೆಗಿನ ಸೂಕ್ತ ತಿಳಿವಳಿಕೆ ಇಲ್ಲದೆ ಸಮರ್ಪಕವೆನಿಸದು. ವಸಾಹತೋತ್ತರ ನವಸಾಮ್ರಾಜ್ಯಶಾಹಿ ವಸಾಹತೀಕರಣದಲ್ಲಿ ಮಹಿಳೆಯ 'ವ್ಯಕ್ತಿಮತ್ತೆ'ಯ ನಿರ್ಮಾಣದ ಬಗೆಗಿನ ಶೋಧನಾತ್ಮಕ ಪರಿಕಲ್ಪನೆಗಳನ್ನು ಆರ್ಥಿಕ ತಜ್ಞರಾಗಲೀ ಸಮಾಜ ವಿಜ್ಞಾನಿಗಳಾಗಲೀ ಮುಖ್ಯವಾಗಿಟ್ಟುಕೊಳ್ಳುತ್ತಾರೆಂಬ ನಿರೀಕ್ಷೆಯನ್ನೇ ನಾವು ಇಟ್ಟುಕೊಳ್ಳುವಂತಿಲ್ಲ. ಸಾಹಿತ್ಯ ವಿಮರ್ಶಕರಾಗಿ ನಾವು ಈ ನಿಟ್ಟಿನಲ್ಲಿ ಆರಂಭಿಕ ಉತ್ಸಾಹ, ಶ್ರದ್ಧೆ, ಪ್ರಾಮಾಣಿಕತೆ ಹೊಂದಿದವರಾಗುತ್ತೇವೆ.

ಸೂರ್ಯನ ಕೆಳಗಿನ ಎಲ್ಲಾ ಭಾಷೆಯನ್ನು ನಾವು ಕಲಿಯಲಸಾಧ್ಯ. ಹಾಗಾಗಿ ನಾವು ನಮ್ಮ ಕಾರ್ಯವನ್ನು ಸಾಮುದಾಯಿಕ ಕಾರ್ಯವಾಗಿ ರೂಪಿಸಿಕೊಳ್ಳಬೇಕು. ಈ ಸಾಮುದಾಯಿಕ ಕಾರ್ಯದಲ್ಲಿ ಅನುಭವಗಮ್ಯ ಸಂಶೋಧನೆ ಹಾಗೂ 'ವ್ಯಕ್ತಿಮತ್ತೆ'ಯ ನಿರ್ಮಾಣದ ಬಗೆಗಿನ ಗಂಭೀರ ಕಾರ್ಯವೇ ಪ್ರಧಾನವಾಗಿರಬೇಕು. ಇಲ್ಲದಿದ್ದಲ್ಲಿ ನವ ಸಾಮ್ರಾಜ್ಯಶಾಹಿಗೆ ಅನುಕೂಲಕರವಾಗುವಂತೆ ತೃತೀಯ ವಿಶ್ವಗಳ ತಾತ್ವಿಕ ಸ್ತ್ರೀವಾದ ಕೆಲಸ ಮಾಡಬಲ್ಲದು. ಹಾಗಾಗಿ ಸೂಕ್ತ ತರಬೇತಿ ಪಡೆದೇ ಅಂತರ್ ಶಿಸ್ತೀಯ ನೆಲೆಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳ ಚಟುವಟಿಕೆಗಳು ನಡೆಯಬೇಕು. CROW, SIROOW ಮುಂತಾದ ಸಂಸ್ಥೆಗಳು

ಸಾಹಿತ್ಯಕ ಸ್ತ್ರೀವಾದಿಗಳಿಗೆ ಈ ವಿಷಯದಲ್ಲಿ ತರಬೇತಿ ನೀಡುವುದು ಅತ್ಯಗತ್ಯ. ಈಗಾಗಲೇ, ವಿದೇಶೀ ಸೇವಾಕಾರ್ಯ, ಸೈನ್ಯ ಶಿಕ್ಷಣ, ಬಹು ರಾಷ್ಟ್ರೀಯ ಸಂಸ್ಥೆಗಳು ಬೌದ್ಧಿಕ ಹತ್ಯಾರವಾಗಿ ಭಾಷಾಕಲಿಕೆಯನ್ನು ಅನಿವಾರ್ಯ ಅಗತ್ಯವಾಗಿ ಪರಿಗಣಿಸಿವೆ. ನಮ್ಮ ಶತ್ರುಗಳಿಂದಲೂ ಕಲಿಯಬೇಕಾದುದು ಇದೇ ಅಲ್ಲವೇ?

ನಮ್ಮ ಸಂಸ್ಕೃತಿ ಹಾಗೂ ಸಾಮಾಜಿಕ ಸಂಶೋಧನೆ ಅಧ್ಯಯನಗಳಲ್ಲಿ ಈ ಜ್ಞಾತೃತ್ವದ ಪ್ರಶ್ನೆಯನ್ನು ಮಹಿಳೆಯ ನೆಲೆಯಿಂದ ಚರ್ಚಿಸಿದವರಲ್ಲಿ ಶಂ.ಬಾ. ಜೋಷಿ ಮುಖ್ಯರು. 'ಜೀವನ : ಸಾಹಿತ್ಯ ಮತ್ತು ಕಲೆ ವಿಮರ್ಶಾತತ್ವದ ಮೂಲಸೂತ್ರ(ಗಳು)' ಲೇಖನವು ಗಾಯಿತ್ರಿ ಸ್ಪೀವಾಕ್ 'ವ್ಯಕ್ತಿಮತ್ವ'ದ ಬಗ್ಗೆ ಹೊಂದಿರುವ ಎಚ್ಚರವನ್ನೇ ಮಾನವತ್ವದ ಮೂಲಭೂತ ಹುಡುಕಾಟವಾಗಿ ಚರ್ಚಿಸುತ್ತದೆ. ಭಾರತೀಯ ಮುಕ್ತಿಯ ಕಲ್ಪನೆಯಲ್ಲಿ ದ್ವಂದ್ವವಿರುವುದಾಗಿ ಶಂಬಾ ತಿಳಿಯುತ್ತಾರೆ. ಈ ಮುಕ್ತಿ ಏಕಕಾಲಕ್ಕೆ ಜನನ ಹಾಗೂ ಮರಣ ಸ್ಥಾನ. ಹಾಗಾಗಿ ಆನಂದ ಹಾಗೂ ಭಯ ಆಂತಕಗಳ ಪ್ರಚೋದಕ ತಾಣ. ವಿಚಾರಗಳಿಗೆ ಅದರದೇ ಆದ ಸನಾತನ ಆಕೃತಿಯು ಇರುವ ಈ ಸೂಕ್ಷ್ಮವು ಭಾರತೀಯ ಇಂದ್ರಿಯ ಪಾತಳಿಯ 'ವಾನರ' ಜೀವರೀತಿ 'ನರ' ಅವಸ್ಥೆಯಾಗಿ ವಿಕಾಸ ಹೊಂದುವಲ್ಲಿ ಬದುಕು ಕಾವ್ಯಾತ್ಮಕಗೊಳ್ಳುತ್ತದೆ. ಇಂಥ ಸಂಕ್ರಮಣಾವಸ್ಥೆಯಲ್ಲಿ ವೈಚಾರಿಕ ಆಕೃತಿಗಳ ಉದಯವಾಗುತ್ತದೆ. ಕತ್ತಲು, ಮರಣ, ರೋಗ, ಸೋಲು ಇವುಗಳ ಭಯವೇ ಬೆಳಗಿನ ಹಬ್ಬವಾಗಿ, ಮೋಕ್ಷವಾಗಿ, ವೈಚಾರಿಕ ಆಕೃತಿ ಪಡೆಯುತ್ತದೆ. ಒಂದು ರೀತಿಯಲ್ಲಿದು ಅಭಾವಾತ್ಮಕ ವಿಚಾರ. ಕೃತಿಯೇ ಆಕೃತಿಗೆ ಕಾರಣ. ಭಾಷೆಯ ಆಂತರಿಕ ಗುಣ ಪ್ರಕಾಶಯುಕ್ತವಿದ್ದರೆ ಉಂಟಾಗುವ ಆಕೃತಿಯು; ಸಾಹಿತ್ಯ ಕಲಾಕೃತಿಯು ಲೋಕ ಕಲ್ಯಾಣಕಾರಿಯೇ ಆದೀತು, ದೇವಮಾತಾ ಅದಿತಿ ಕಲ್ಪನೆಯ ಸ್ತ್ರೀತ್ವದ ಮೇಲೆ ಪುರುಷರೂಪಿ ದೇವನ ಹಕ್ಕು ಸ್ಥಾಪನೆಯೇ 'ಮೋಕ್ಷ'ದ ಪರಿಕಲ್ಪನೆಯಾಗುತ್ತದೆ. ಇದನ್ನು ಶಂಬಾ ಹೀಗೆ ವಿವರಿಸುತ್ತಾರೆ:


ಶಂ.ಬಾ. ಜೋಷಿ

"ಪುರುಷಾರ್ಥ : ಮೋಕ್ಷ ಇದು, ಪುರುಷನ : ನರೇಶನ ಅರ್ಥ! ನಾರಿಗೆ ಮುಕ್ತಿ ಎಲ್ಲಿ? ಇವಳನ್ನು ಅ-ವಿಮುಕ್ತ ಕುರುಕ್ಷೇತ್ರ ಎಂದಿದೆ ಜಾಬಾಲೋಪನಿಷತ್ತು! ಆದುದರಿಂದ, ನಾರೀ ಮುಕ್ತಿ ಆಂದೋಲನಕ್ಕೆ ಆಮಂತ್ರಣ ದೊರೆತಿದೆ ಇಂದು!" (ಜೀವನ : ಸಾಹಿತ್ಯ ಮತ್ತು ಕಲೆ, ವಿಮರ್ಶಾತತ್ವದ ಮೂಲಸೂತ್ರಗಳು(ಲೇ) ಶಂಬಾಕೃತಿ ಸಂಪುಟ, 5, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 1999, ಪು:#36).

ಆಧುನಿಕ ಮಹಿಳಾ ಸಾಹಿತ್ಯ ವಿಮರ್ಶೆಯಲ್ಲಿಂದು ಹೆಣ್ಣನ್ನು 'ಅ-ವಿಮುಕ್ತ ಕುರುಕ್ಷೇತ್ರ' ಪರಿಕಲ್ಪನೆಯಿಂದ ಬಿಡಿಸುವ ಯತ್ನ ಪ್ರಜ್ಞಾಪೂರ್ವಕವಾಗಿಯೇ ನಡೆದಿದೆ. ಇ.ಪಿ. ರೈಸರ್‌ರ ಆಕ್ಷೇಪಣೆಗೆ ಗುರಿಯಾದ ಪ್ರಾಚೀನ ಕನ್ನಡ 'ಅಶ್ಲೀಲ' ಕಾವ್ಯಭಾಗಗಳ ಬಗ್ಗೆ ಪ್ರತಿಕ್ರಿಯಾತ್ಮಕವಾಗಿ ಸಿದ್ಧಗೊಂಡ ನವೋದಯ ಕಾವ್ಯಮೀಮಾಂಸೆಯೂ ಹೆಣ್ಣನ್ನು 'ಅ-ವಿಮುಕ್ತ ಕುರುಕ್ಷೇತ್ರ'ವಾಗಿಯೇ ಪರಿಗಣಿಸಿತು. ಸ್ತ್ರೀವಾದಿ ವಿಮರ್ಶೆಯ ನೆಲೆಯಲ್ಲಿ ಮಾಸ್ತಿ, ಕಾರಂತ, ಕುವೆಂಪು, ಬೇಂದ್ರೆ, ಶ್ರೀರಂಗರಂಥ ಮಹತ್ವದ ಲೇಖಕರನ್ನು ಪುನರ್ಮೌಲ್ಯಮಾಪನಕ್ಕೊಳಪಡಿಸಿದ ಚಾರಿತ್ರಿಕ ಸಂದರ್ಭವಿದು. ಈ ವಿಮಾರ್ಶಾ ಲೇಖನಗಳು ಗಾಯಿತ್ರೀ ಸ್ಪೀವಾಕ್ ಆರಿಸಿದಂಥ 'ವ್ಯಕ್ತಿಮತ್ತೆ'ಯ ಪ್ರಶ್ನೆಯನ್ನು ಕೇಂದ್ರವಾಗಿಟ್ಟುಕೊಂಡೇ ಚರ್ಚಿಸಿವೆ. ಸ್ತ್ರೀ-ಪುರುಷ ಸಮಾನತೆಯ ನೆಲೆಗಿಂತ ಕುವೆಂಪು ಅವರು ಜಗತ್ತಿನ ಮೂಲಭೂತ ಶಕ್ತಿಯ ಅನೂಹ್ಯ ಸಾಮರ್ಥ್ಯ, ನಿಗೂಢತೆಯ ಪ್ರತೀಕವಾಗಿ ಸ್ತ್ರೀ ಪಾತ್ರಗಳನ್ನು ಬಳಸಿಕೊಳ್ಳುವುದನ್ನು ಬಿ.ಎನ್. ಸುಮಿತ್ರಾಬಾಯಿಯವರು ವಿಶ್ಲೇಷಿಸುತ್ತಾರೆ. (ಕುವೆಂಪು ಅವರ ಕಾದಂಬರಿಗಳಲ್ಲಿ ಸ್ತ್ರೀತ್ವದ ಪ್ರತೀಕಗಳು, **ವಿಚಯ,** ಇಳಾಪ್ರಕಾಶನ, ಬೆಂಗಳೂರು) ತಾಯ್ತನದ ವೈಭವೀಕರಣವು ಏಕಕಾಲಕ್ಕೆ ಸಾಮಾಜಿಕವಾಗಿ ಕೆಳನೆಲೆಯಲ್ಲಿರುವ ಜೀತದಾಳು ಸೇಸಿಯನ್ನೂ ಸೌಲಭ್ಯಸಂಪನ್ನ ವರ್ಗದ ದೇವಮ್ಮನನ್ನೂ ಒಂದೇ ಪಾತಳಿಯಲ್ಲಿರಿಸಬಹುದಾದ ವಿಸಂಗತಿ ಕಲ್ಪಿಸುತ್ತದೆ. ಮಗುವಿಗೆ ಹಾಲೂಡಿಸುವ ದೇವಮ್ಮನ ಮನೋಪಾತಳಿಯು ಕಾವ್ಯ ಪ್ರಪಂಚದಲ್ಲಿ ಯಾತ್ರಿಯಾಗುವ ರಸಾಸ್ವಾದಿ ಸಹೃದಯ ಪ್ರಜ್ಞೆಗೆ ಸಂವಾದಿಯಾಗುತ್ತದೆ ಎಂಬ ಮೀಮಾಂಸೆಯನ್ನು ಸುಮಿತ್ರಾಬಾಯಿಯವರು ಒಪ್ಪುವುದಿಲ್ಲ. ಈ ಮೀಮಾಂಸೆಯ ಮಿತಿ ಕುವೆಂಪು ಸೃಜನಶೀಲತೆಯ ಮಿತಿಯೂ ಆಗಬಲ್ಲದುದಾಗಿ ವಿಮರ್ಶಕಿಗೆ ಕಾಣುತ್ತದೆ. ಸಫಲದಾಂಪತ್ಯದ ಆದರ್ಶ ಕಲ್ಪನೆಯುಳ್ಳ ಬೇಂದ್ರೆಯವರ 'ಮನದನ್ನೆ' ಕವನವು ಹೆಣ್ಣಿನ ಆದರ್ಶೀಕೃತ ಗುಣಗಳನ್ನು ಗಂಡಿನ ಹಕ್ಕೆಂಬಂತೆ ನಿರೀಕ್ಷಿಸುವುದನ್ನು ಎಂ. ಆಶಾದೇವಿ ಪ್ರಶ್ನಿಸುತ್ತಾರೆ. ಪುರುಷ ಸಾಹಿತ್ಯದಲ್ಲಿನ ಮಹಿಳಾ ಪ್ರತಿನಿಧೀಕರಣದ ಹಿಂದಿರುವ ರಾಜಕಾರಣವನ್ನು ಮಹಿಳಾ ವಿಮರ್ಶೆ ಸಮರ್ಥವಾಗಿಯೇ ಬಯಲಿಗೆಳೆದಿದೆ.

ಮಹಿಳಾ ಸಾಹಿತ್ಯವನ್ನು ಪುರುಷ ವಿಮರ್ಶಕರು ವಿಶ್ಲೇಷಣೆ ಮಾಡುವಲ್ಲಿನ ವಿಪರ್ಯಾಸಗಳ ಬಗ್ಗೆ ಕೂಡ ನಮ್ಮ ವಿಮರ್ಶಕಿಯರು ಜಾಗೃತರಾಗಿದ್ದಾರೆ. 'ಮಹಿಳಾ ಸಂವೇದನೆ'ಯನ್ನು ಮಹಿಳೆಯರ ಬರಹಕ್ಕೆ ಮಾತ್ರ ಸೀಮಿತಗೊಳಿಸಿ ನೋಡುವ ಪುರುಷ ವಿಮರ್ಶಕರ ಧೋರಣೆಯು ಮಹಿಳಾ ಸೃಜನಶೀಲತೆಯನ್ನು ಪರಿಮಿತಗೊಳಿಸಬಹುದೆಂಬ ಎಚ್ಚರಿಕೆಯನ್ನು ಹೊಂದಲಾಗಿದೆ. ಸುನಂದ ಬೆಳಗಾಂವಕರರ 'ನಾಸು' ಕಾದಂಬರಿಯ ವಿಮರ್ಶೆಯಲ್ಲಿ ಬಿ.ಎನ್. ಸುಮಿತ್ರಬಾಯಿಯವರು ಮಹಿಳಾ ಸಂವೇದನೆಯ ಪ್ರಶ್ನೆಯನ್ನು ಬೇರೊಂದು ನಿಟ್ಟಿನಿಂದ ಅರ್ಥೈಸುತ್ತಾರೆ. 'ಪೌರುಷ' ಮತ್ತು 'ಸ್ತ್ರೀತ್ವ'ಗಳ ಪರಂಪರಾಗತ ನಂಬಿಕೆಯನ್ನು ಅಲುಗಾಡಿಸುವಂಥ ಅಂಶ 'ನಾಸು'ವಿನಲ್ಲಿದ್ದು, ಪುರುಷ ವಿಕಾಸದ ಸಾಧ್ಯತೆಯಾಗಿ 'ಸ್ತ್ರೀ' ಗುಣಗಳೊಂದಿಗಿನ ತಾದಾತ್ಮ್ಯವನ್ನು ಮೌಲ್ಯವಾಗಿ ಕೃತಿ ಎತ್ತಿ ಹಿಡಿಯುತ್ತದೆ. ಸ್ತ್ರೀ ಅನುಭವವನ್ನು ಯಾವುದೇ ಲೇಖಕರು ತಮ್ಮ


ಬಿ.ಎನ್. ಸುಮಿತ್ರಾಬಾಯಿ

ಸ್ವಾನುಭವದಿಂದ ಸಾಕ್ಷಾತ್ಕರಿಸಿಕೊಳ್ಳಬಹುದಾದ ಸಾಧ್ಯತೆ ಇದ್ದು, ಪುರುಷರಿಂದ ರಚನೆಯಾದ ಸಾಹಿತ್ಯವೆಲ್ಲವನ್ನೂ ಸ್ತ್ರೀವಿರೋಧಿ ಎಂದೇ ನೋಡಬೇಕಾದುದು ಸರಿಯಲ್ಲ ಎಂಬ ಅಭಿಪ್ರಾಯ ವಿಜಯಾ ದಬ್ಬೆಯವರದು. ಓದುಗ ಕೇಂದ್ರಿತ ವಿಮರ್ಶಾ ಸಿದ್ಧಾಂತದ ಪ್ರಚುರತೆಯಿಂದಾಗಿ 'ಮಹಿಳಾ ಓದು' ಸ್ತ್ರೀವಾದಿ ವಿಮರ್ಶೆಯಲ್ಲಿ ಪ್ರಧಾನ ಪಾತ್ರ ವಹಿಸಿದೆ.ಮಹಿಳಾ ಓದಿನ ಅವಶ್ಯಕತೆ ಕುರಿತಂತೆ ವಿಜಯಾ ದಬ್ಬೆಯವರು ಹೇಳುವ ಮಾತುಗಳು ಇಂತಿವೆ: **"......ನಮ್ಮ ಜೈವಿಕಲಿಂಗ ಪ್ರಜ್ಞೆಯೊಂದಿಗೆ, ಲಿಂಗವ್ಯವಸ್ಥೆಯ ಪ್ರಜ್ಞೆಯೊಂದಿಗೆ, ಲಿಂಗವ್ಯವಸ್ಥೆಯಲ್ಲಿನ ಪಾತ್ರದೊಂದಿಗೆ ಒಂದು ವಿಶಿಷ್ಟಕೋನದಿಂದ ನಾವು ಸಾಹಿತ್ಯವನ್ನು ಓದುವುದು ಸಾಧ್ಯ. ಫಣಿರಾಯ ತಿಣುಕುವಷ್ಟು ರಾಮಾಯಣಗಳು ಬಂದಿದ್ದರೂ ಆ ರಾಮಯಣಗಳಲ್ಲಿ ಹಲವನ್ನು ಬೇರೆ ಬೇರೆ ಕಾರಣಗಳಿಗಾಗಿ ನಾವು ಮೆಚ್ಚಿದರೂ ಹಲವರು ಕೇಳಿಯೇ ಇರದ ಎಚ್.ವಿ. ಸಾವಿತ್ರಮ್ಮನವರ 'ಸೀತೆ ರಾಮ ರಾವಣ'ದ ಕೌಸಲ್ಯೆ, ಸೀತೆ, ಸುಮಿತ್ರೆ ಮೊದಲಾದವರು ನಮ್ಮನ್ನು ಆಳವಾಗಿ ತಟ್ಟುವುದೇಕೆ? ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಬಹುತೇಕ ಹೆಂಗಸಿನ ಮನಸ್ಸು ಎಂಬುದೇ ಕಾಣದಾದಾಗ ನಾವು ಪರಿತಪಿಸುವುದೇಕೆ? ತೇಜಸ್ವಿಯವರ ಚಿದಂಬರ ರಹಸ್ಯದ ಕಲಾತ್ಮಕತೆಯನ್ನು ನಾವು ಇಷ್ಟಪಟ್ಟರೂ ಒಂದು ಬಗೆಯ ಪರಕೀಯತೆ ನಮ್ಮನ್ನು ಅಲ್ಲಿ ಕಾಡುವುದೇಕೆ? 'ಗಿಡವೆಂದು ಬಗೆದೆಯೋ ಹೆಣ್ಣು ಜನ್ಮದ ಒಡಲ ಫಲಗಳನು ಸೃಜಿಸುವುದಕೆ?' ಎಂಬ ಬೆಳಗೆರೆ ಜಾನಕಮ್ಮನವರ ಪ್ರಶ್ನೆ, ಅನುಭವ ನಮಗೆ ಪ್ರಧಾನ ವ್ಯವಸ್ಥೆಯ ಪ್ರತಿಕ್ರಿಯೆಯೊಂದಿಗೆ ಸಂಪೂರ್ಣವಾಗಿ ಸಮೀಕರಿಸಿಕೊಳ್ಳಲಾಗುವುದಿಲ್ಲ". (ಪು.80, ನಾರಿ–ದಾರಿ–ದಿಗಂತ)**

ಓದುಗ ಕೇಂದ್ರಿತ ಸಿದ್ಧಾಂತಗಳು ಕೃತಿನಿಷ್ಠ ವಿಮರ್ಶಾ ವಿಧಾನದ ಮಿತಿಗಳನ್ನು ಮೀರುವಲ್ಲಿ ಯಶಸ್ವಿಯಾಗಿವೆ. ಕಥೆಯ ಓದಿನ ಸಂದರ್ಭದಲ್ಲಿನ ಅನುಭವವನ್ನು ಸ್ವತಃ ನಮಗೆ ನಾವೇ ಅರಿಯುವಂತೆ ಮಾಡಲು ಹೊಸ ತಂತ್ರವಿಧಾನವನ್ನು ಐ.ಎ. ರಿಚರ್ಡ್ಸ್ ರೂಪಿಸಿದ. ಅರ್ಥಗ್ರಹಿಕೆಗೆ ಸಂಬಂಧಿಸಿದ ತೊಡಕುಗಳನ್ನು ಆತ ದೀರ್ಘವಾಗಿ ವಿವೇಚಿಸುತ್ತಾ ಮಹಿಳಾ ಓದುಗರ ಕುರಿತು ಆಡಿರುವ ಮಾತುಗಳು ಪೂರ್ವಾಗ್ರಹಪೀಡಿತವಾಗಿವೆ. ಪ್ರಾಯೋಗಿಕ ವಿಮರ್ಶೆಯ ಸಿದ್ಧಾಂತವನ್ನು ರೂಪಿಸಲು ಕೈಗೊಂಡ ಪ್ರಯೋಗದಲ್ಲಿ – ಸಿದ್ಧವಾದ ಕವನಗಳ ಬಗೆಗಿನ ಅಭಿಪ್ರಾಯ ಬರಹಗಳನ್ನು ರಿಚರ್ಡ್ಸ್ ವಿಶ್ಲೇಷಿಸುತ್ತಾ ವಿಮರ್ಶೆಯ ತೊಡಕಿನ ಬಗ್ಗೆ ಪ್ರಸ್ತಾಪಿಸುತ್ತಾನೆ:

*A strong suspicion that I developed in looking over the protocols, that the women – writing were of higher average discernment than the men, is perhaps relevant in this connection. For the young woman of nineteen is generally supposed to be nearer to her find settled character, in most respects, than the equivalent young man. A better explanation would be the greater familiarity with poetry that is certainly possessed by the average girl. A lack of experience with poetry must be placed next to general inexperience of life in this list of deficiencies....." (Practical Criticism, p.311).*

ಸಾಹಿತ್ಯ ಕೃತಿಯನ್ನು ಹೊಸ ನೈತಿಕ ದೃಷ್ಟಿಯ ಅಂತರ್ಗತೀಕರಣಕ್ಕೆ ಅವಕಾಶ ಮಾಡಿಕೊಡಬಲ್ಲ ಸ್ವಾಯತ್ತ ಜಗತ್ತಾಗಿ ನವ್ಯ ಲೇಖಕರು ಪರಿಭಾವಿಸಿದರು. ಈ ಹೊಸ ನೈತಿಕ ದೃಷ್ಟಿಯು ವ್ಯಾವಹಾರಿಕ ಸಾಮಾಜಿಕ ವಲಯದ ಸೀಮಿತ ನೈತಿಕ ದೃಷ್ಟಿಗಿಂತ ಭಿನ್ನ. ಹೊಸ ನೈತಿಕ ದೃಷ್ಟಿಯ ಅಂತರ್ಗತೀಕರಣಕ್ಕೆ, ಬಿಗಿಯಾದ ಬಂಧದೊಳಗಿನ ಸಮೃದ್ಧ ಜೀವನಾನುಭವದ ವಿವರಗಳ ತನ್ಮಯೀ ಓದು ಅತ್ಯಗತ್ಯ. ಹಾಗಾಗಿ ನವ್ಯ ವಿಮರ್ಶೆ ದಲಿತ ಬಂಡಾಯದ ಜೊತೆ ಮಹಿಳಾವಾದಿ ಎಚ್ಚರದ ಆಶಯವುಳ್ಳ ಕೃತಿಗಳಲ್ಲಿ ಕಲಾತ್ಮಕತೆಯ ಅಭಾವವನ್ನು ಕಂಡಿತು. ಮಾಸ್ತಿಯವರಿಗೆ ತಿರುಮಲಾಂಬಾರ ಕೃತಿಗಳಲ್ಲಿ ಲೆಕ್ಚರುಗಳು ಹೇಗೆ ಕಲಾತ್ಮಕತೆಯ ಲೋಪವೆನಿಸಿದವೊ ಹಾಗೆಯೇ ಮಹಿಳಾ ಸಾಹಿತ್ಯದಲ್ಲಿನ ಸ್ತ್ರೀವಾದಿ ನಿಲುವುಗಳು ಬಂಧದ ಹಂಗಿಲ್ಲದ ಪ್ರಚಾರ ರೂಪಿ ಆಶಯದ ಪ್ರತಿಪಾದನೆ ಮಾತ್ರವೆನಿಸಿದವು. ಸಾಹಿತ್ಯ ಕೃತಿಯನ್ನು ಛಿದ್ರಗಳಿಲ್ಲದೆ, ಕಿಟಕಿಗಳಿಲ್ಲದ ಆವೃತ ಕೋಟೆಯಂತೆ ಕಲಾತ್ಮಕಗೊಳಿಸುವ ಭರದಲ್ಲಿ ಪುರುಷ ಪ್ರಜ್ಞೆಯ ನೈತಿಕತೆಯನ್ನು ಶೋಧಕ್ಕೆ ಒಳಪಡಿಸುವಲ್ಲಿ ಸೋತ ನವ್ಯರ ಕೃತಿಗಳ ಬಗ್ಗೆ ವಿಜಯಾ ದಬ್ಬೆ ಪ್ರತಿಕ್ರಿಯಿಸುತ್ತಾರೆ:


ವಿಜಯಾ ದಬ್ಬೆ

"...... ಭೋಗಕ್ಕೆ ಬಳಕೆಯಾದವಳ ಅನುಭವವೇನು ಎಂಬುದಕ್ಕೆ ನಮ್ಮ ಸಾಹಿತ್ಯದಲ್ಲಿ ಉತ್ತರವಿದೆಯೆ? ಬಹುಶಃ ಇದಕ್ಕೆ ಉತ್ತರವನ್ನು ಪರಂಪರೆ ಯಾವುದನ್ನು ಕುರಿತು ಮಾತನಾಡಲು ನಿಷೇಧ ವ್ಯಕ್ತ ಮಾಡಿತೋ ಅದರಲ್ಲಿ ನೋಡಬೇಕಾದೀತು. ಹೆಣ್ಣಿನ ಲೈಂಗಿಕ ಸಂತೋಷದ ಅಭಿವ್ಯಕ್ತಿ ಅಂಥ ನಿಷೇದಕ್ಕೆ ಒಳಗಾಗಿತ್ತು..... ಒಂದೆಡೆ ಅವಳೂ ದೇಹದ ಬಯಕೆಯುಳ್ಳವಳೆಂಬುದನ್ನು ಮರೆಮಾಚಿದರೆ ಇನ್ನೊಂದೆಡೆ ಅವಳ ಕಾಮದಾಹ ತೃಪ್ತಿಯ ಬಗೆಗೆ ಮಾತನಾಡ ಹೊರಟ ಕೃತಿಗಳು 'ಮರಂಕಿ'ಯನ್ನು ಸೃಷ್ಟಿಸದ್ದೇ ಹೆಚ್ಚು. ಕೃಷ್ಣ ಆಲನಹಳ್ಳಿಯ 'ಪರಸಂಗದ ಗೆಂಡೆತಿಮ್ಮ' ಕಾದಂಬರಿಯ ಕೇಂದ್ರ ಪಾತ್ರವಾದ ಮರಂಕಿಯ ದೇಹ ಸಮೃದ್ಧಿ ದೇಹದಾಹವು ಹೆಚ್ಚು ಕಡಿಮೆ ಒಂದು ಪಶುಮಟ್ಟದ ವಿವರದಲ್ಲಿ ಉಳಿದುಬಿಟ್ಟಿದೆ. ಪ್ರಾಣೇಶಾಚಾರ್ಯರುಗಳಿಗೆ ತಮ್ಮನ್ನೊಪ್ಪಿಸಿಕೊಳ್ಳಲು ನಿಂತ ಸ್ತ್ರೀಯರು ಕಾಣಿಸಿದರೆ ಹೊರತು ಪ್ರಾಣೇಶಾಚಾರ್ಯರ ಪ್ರತಿಪಾತ್ರವಾದ ಸ್ತ್ರೀಪಾತ್ರಗಳು ಸಾಮಾನ್ಯವಾಗಿ ಕಾಣಲಿಲ್ಲ".

*(ಮುಂದುವರಿಯುವುದು)*

*Edited, Printed, Published and owned by Rajeshwari H.S., No. 114/5, 9th Cross, 2nd Main, Chamarajpet, Bangalore - 560 018.*
*Printed at ILA Mudrana, No. 36, 40 Ft. Road, Raghavanagara, New Timberyard Layout, Bangalore - 560 026.*
*Published at No. 114/5, 9th Cross, 2nd Main, Chamarajpet, Bangalore - 560 018. Editor : Rajeshwari H.S.*



# ಕರ್ನಾಟಕ

ಕರುನಾಡ ಸಿರಿನುಡಿ - ಕನ್ನಡ

ಕಸ್ತೂರಿ ಪರಿಮಳದ ಕುಡಿ - ಕನ್ನಡ ನುಡಿ

ಹಾಲ್ಜೇನಿನ ಮಧುರ ಝರಿ - ಕನ್ನಡ ನಾಣ್ಣುಡಿ























ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ.

ಮಾದರಿ ಆಡಳಿತದ ಮಾರ್ಗದರ್ಶಿ ರಾಜ್ಯ ಕರ್ನಾಟಕ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ತವರೂರು.

ಕರ್ನಾಟಕದ ರಾಜಧಾನಿ ಬೆಂಗಳೂರು ವಿಶ್ವವಿಖ್ಯಾತಿಯ ನಗರ.

ಇಂತಹ ಭವ್ಯ ಪರಂಪರೆಯ ಮತ್ತು ಸಮೃದ್ಧಿಯ ನಾಡು, ಕನ್ನಡಿಗರ ಹೆಮ್ಮೆಯ ಬೀಡು.


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2007-09

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕ ಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆ ಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳ ಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದ ಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆ ಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆ ಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸ ಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018